

ಹರೇ ವೆಂಕಟಶೈಲ ವಲ್ಲಭ ಪೊರೆಯಬೇಕು ಎನ್ನ ॥ ಪ ॥

ದುರಿತದೂರ ನೀನಲ್ಲದೆ ಧರೆಯೊಳು
ಪೊರೆವರ ನಾಕಾಣೆ ನಿನ್ನಾಣೆ ॥ ಅ. ಪ. ॥

ಆರು ನಿನ್ನ ಹೊರತೆನ್ನ ಪೊರೆವರು ನೀರಜಾಕ್ಷ ಹರಿಯೆ ಅ
ಪಾರ ಮಹಿಮ ಪುರಾಣಪುರುಷ ಘೋರ ದುರಿತಗಳ ದೂರಮಾಡಿಸೋ

ಇಂದಿರೇಶ ಅರವಿಂದ ನಯನ ಎನ್ನ ತಂದೆ ತಾಯಿ ನೀನೆ
ಹೊಂದಿದವರ ಅಘವೃಂದವ ಕಳೆವ ಮಂದರಾದ್ರಿ ಧರನೆ ಶ್ರೀಧರನೇ

ಮಂಗಳಾಂಗ ಮಹನೀಯ ಗುಣಾರ್ಣವ ಗಂಗೋದಿತಪಾದ
ಅಂಗಜಪಿತ ಅಹಿರಾಜಶಯ್ಯ ಶ್ರೀರಂಗ ವಿಠಲ ದೊರೆಯೇ ಶ್ರೀಹರಿಯೇ

— ಶ್ರೀ ಶ್ರೀಪಾದರಾಜರು.

ಸಂದರ್ಶಿಸಿ ಆನಂದಿಸಿ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ

## ತಿರುಪತಿ

**ವಾರ್ಷಿಕ ಬ್ರಹ್ಮೋತ್ಸವಗಳು 22–5–88 ರಿಂದ 31–5–88 ವರೆಗೆ**

| | | |
|---|---|---|
| 23–5–88 | — | ಧ್ವಜಾರೋಹಣ |
| 27–5–88 | — | ಗರುಡೋತ್ಸವ |
| 30–5–88 | — | ರಥೋತ್ಸವ |
| 31–5–88 | — | ಧ್ವಜಾವರೋಹಣ |

ಸೂಚನೆ:– ಬ್ರಹ್ಮೋತ್ಸವದ ದಿನಗಳಲ್ಲಿ ಬೆಳಗ್ಗೆ ಸಂಜೆಗಳಲ್ಲಿ ವಾಹನೋತ್ಸವಗಳೂ, ಸಂಜೆಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆಯುತ್ತವೆ. ನಿಮ್ಮ ಹತ್ತಿರದ ತಿ. ತಿ. ದೇ. ವಿಚಾರಣಾಕೇಂದ್ರದಲ್ಲಿ ಹೆಚ್ಚಿನ ಮಾಹಿತಿಯನ್ನು ಪಡೆಯಬಹುದು.

**ತಿ. ತಿ. ದೇ.**

---

ಸಂದರ್ಶಿಸಿ ಆನಂದಿಸಿ

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ

## ನಾರಾಯಣವನಂ

**ವಾರ್ಷಿಕ ಬ್ರಹ್ಮೋತ್ಸವಗಳು 27–5–88 ರಿಂದ 5–6–88 ರವರೆಗೆ**

| | | |
|---|---|---|
| 1–6–88 | — | ಗರುಡೋತ್ಸವ |
| 4–6–88 | — | ರಥೋತ್ಸವ |
| 5–6–88 | — | ಧ್ವಜಾವರೋಹಣ |

ಸೂಚನೆ:– ಬ್ರಹ್ಮೋತ್ಸವದ ದಿನಗಳಲ್ಲಿ ಬೆಳಗ್ಗೆ ಸಂಜೆಗಳಲ್ಲಿ ವಾಹನೋತ್ಸವಗಳೂ, ಸಂಜೆಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆಯುತ್ತವೆ. ನಾರಾಯಣವನಂ ತಿರುಪತಿಯಿಂದ ಮದ್ರಾಸಿಗೆ ಪುತ್ತೂರು ಮೂಲಕ ಹೋಗುವ ಹಾದಿಯಲ್ಲಿ ತಿರುಪತಿಯಿಂದ ನಲವತ್ತು ಕಿ.ಮೀ. ದೂರದಲ್ಲಿದ್ದು ವಿಶೇಷವಾಗಿ ಬಸ್‌ಸೌಲಭ್ಯವಿದೆ. ಹೆಚ್ಚಿನ ಮಾಹಿತಿಗಾಗಿ ನಿಮ್ಮ ಬಳಿಯ ತಿ. ತಿ. ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ




ಗೌರವ ಸಂಪಾದಕರು :

ಶ್ರೀ ಸಿ. ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :

[illegible]. ಸುಬ್ಬರಾವ್, ಎಂ.ಎ.,

ಉಪಸಂಪಾದಕ :

ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ।


ಸಂಪುಟ ೧೮]    ಮೇ ೧೯೮೮    [ಸಂಚಿಕೆ ೧೨


# ವಿಷಯಸೂಚಿ



ಮುಖಚಿತ್ರ : ಭಕ್ತ ಆಂಜನೇಯ    ಚಿತ್ರ — ಆರ್. ಬಾಬುನಾಥ್.

ಒಳಗಡೆ — 1. ನಾರಾಯಣವನಂ ಕಲ್ಯಾಣ ವೆಂಕಟೇಶ್ವರಸ್ವಾಮಿ ರಥೋತ್ಸವ ಹಾಗೂ ಉತ್ಸವಮೂರ್ತಿ.

2. ಶ್ರೀ ಗೋವಿಂದರಾಜಸ್ವಾಮಿ ರಥೋತ್ಸವ.

ಹಿಂಬದಿ : ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ರಾಜಗೋಪುರ.

# ಸಂಪಾದಕೀಯ

ಹನುಮಂತರಾಯಸ್ವಾಮಿಯ ದೇವಾಲಯವಿಲ್ಲದ ಊರು ಪ್ರಾಯಃ ಭಾರತದಲ್ಲಿ ಬಹುಕಡಿಮೆ. ದಕ್ಷಿಣ ಭಾರತದಲ್ಲಿಯಂತೂ ಹನುಮಂತದೇವರ ಗುಡಿ ಊರಿನ ಹೊರಗೆ ಇದ್ದೇ ಇರಬೇಕು. ಮಲಗುವಾಗ ಮಕ್ಕಳಿಗೆ ಆಂಜನೇಯ ದಂಡಕವನ್ನು ತಾಯಂದಿರು ಹೇಳಿಕೊಡುತ್ತಾರೆ. ಅಭ್ಯಂಜನ ಮಾಡಿಸುವಾಗ ಅವನಂತೆ ಚಿರಂಜೀವಿಯಾಗು ಎಂದು ಆಶೀರ್ವದಿಸುತ್ತಾರೆ. ಜನಜೀವನದಲ್ಲಿ ಅಷ್ಟು ಮಟ್ಟಿಗೆ ಹಾಸುಹೊಕ್ಕಾಗಿ ಹರಡಿ ಹೋಗಿದೆ ಆಂಜನೇಯನ ಪ್ರಭಾವ. ಅವನಿದ್ದಲ್ಲಿ ಭಯವಿಲ್ಲ. ಹಿಂಜರಿತವಿಲ್ಲ, ಸ್ವಾರ್ಥ ಸಿಟ್ಟುಗಳಿಲ್ಲ.

ಆಂಜನೇಯನ ಪಾತ್ರಕ್ಕೆ ಅಷ್ಟು ಮಹತ್ವ ಬಂದುದಾದರೂ ಎಂತು? ಅವನ ಜೀವನ ಚಿತ್ರ ಮನೆಮಂದಿಗೆಲ್ಲ ಆದರ್ಶ ವಾಗುವಂತೆ ಆದದ್ದೆಂತು? ಈ ಪ್ರಶ್ನೆಗಳನ್ನು ಬಿಡಿಸಿನೋಡಿದರೆ ಇಂದಿನ ಪ್ರಕ್ಷುಬ್ಧ ಸಂಧಿಕಾಲಕ್ಕೆ ತುಸು ಮಾರ್ಗದರ್ಶಿ ಬೆಳಕು ಬೀರುವಂತೆ ಆಗಬಹುದೇನೊ ಅನ್ನಿಸದಿರದು.

ಆಂಜನೇಯ ಸುತನೆಂದು ಪ್ರಖ್ಯಾತನಾದ ಅವನಿಗೆ ಹನುಮಂತ, ಮಾರುತಿ, ಎಂದೆಲ್ಲ ಕರೆಯುವುದುಂಟು. ಅವನ ತಂದೆ ತಾಯಿಗಳಿಂದ ಬಂದ ಹೆಸರುಗಳೋ, ಅವನ ಕೃತ್ಯಗಳಿಂದ ಬಂದ ಹೆಸರುಗಳೋ, ಇತರರು ನೀಡಿದ ಬಿರುದುಗಳೋ ಆಗಿವೆ ಎಲ್ಲ. ಅವನಿಗೆ ತನ್ನದೆನ್ನುವ ಹೆಸರು ಇಲ್ಲ. ಅವನ ಜೀವನವೇ ಹಾಗೆ- ಇನ್ನೊಂದು ಹಿರಿದಾದ ತತ್ತ್ವಕ್ಕೆ ತನ್ನ ಸರ್ವಸ್ವವನ್ನೂ ಅರ್ಪಿಸಿಕೊಂಡ ಜೀವನ. ಅವನಿಗೆ ಸ್ವಂತ ಹೆಸರು ಸ್ವಂತಜೀವನ ಇದ್ದರೂ-ಅದು ನಗಣ್ಯ. ಬದುಕೇ ಅಂಕಿತವಾಯಿತು- ರಾಮ ಸೀತಾ ಸುಗ್ರೀವ ಸಂತೋಷಕ್ಕೆ. ಅಸ್ಖಲಿತ ಬ್ರಹ್ಮಚರ್ಯ, ಯೋಗಾಭ್ಯಾಸ, ಸಂಗೀತ ವ್ಯಾಕರಣ ವಿದ್ವತ್ತೆ, ಪಾದರಸಕ್ಕಿಂತ ಚುರುಕಾದ ಬುದ್ಧಿ ಪ್ರಪಾಢಿಮೆ ಎಲ್ಲವೂ ಸಮಷ್ಟಿಯ ಉದ್ಧಾರಕ್ಕೆ, ಸ್ವಾಮಿ ಸಂತೋಷಕ್ಕೆ ಮೀಸಲು, ಸಮುದ್ರಲಂಘನ, ಸೀತಾನ್ವೇಷಣ, ರಾವಣ ಸಭಾ ಸಂದರ್ಶನ, ಲಂಕಾದಹನ, ಸಂಜೀವಿನಿ ಪರ್ವತದ ತರೋಣ, ಎಲ್ಲದರಲ್ಲೂ ಅವನ ಸ್ವಾಮಿಕಾರ್ಯ ಧುರಂಧರತೆ ಸ್ಫುಟವಾಗಿ ಮೂಡಿಬರುತ್ತದೆ.

ಶ್ರೀರಾಮದೂತ ನೆಂದು ಹೆಸರಾದ ಹನುಮಂತ ದೊರೆ ಹೇಳಿದ್ದನ್ನು ಚಾಚೂ ತಪ್ಪದೆ ಮಾಡುವ ಸೇವಕ ಮಾತ್ರನೇನಲ್ಲ, ಸೀತಾನ್ವೇಷಣದಲ್ಲಿ ರಾವಣ ಬಲಪರೀಕ್ಷೆ ಮಾಡುವ, ಲಂಕೆಯನ್ನು ಸುಡುವ ಅವನ ಕ್ರಿಯೆಗಳು, ತತ್‌ಕ್ಷಣದ ಸ್ವಂತ ನಿರ್ಧಾರಗಳಿಂದ ಆದವು. ಅಲ್ಲಿ ಸ್ವಾಮಿಕಾರ್ಯದಲ್ಲಿ ಹೇಳಿದಷ್ಟು ಮಾತ್ರವೇ ಮಾಡದೆ ಗುಣಾತ್ಮಕವಾಗಿ ಚಿಂತಿಸುವ ಬುದ್ಧಿ ಪ್ರೌಢಿಮೆಯಿರುವುದನ್ನು ಯಾರಾದರೂ ಗುರುತಿಸಬಹುದು. ವಿಭೀಷಣ ಶರಣಾಗತಿಯ ಸಂದರ್ಭದಲ್ಲಿ ಇಡೀ ವಾನರ ಪ್ರಮುಖ ಶ್ರೇಣಿಯೇ ಒಮ್ಮತದಿಂದ ವಿಭೀಷಣ ಶತ್ರು ಪಕ್ಷದವನೆಂದರೂ ತಾನು ಮಾತ್ರ ತನ್ನ ಅಭಿಪ್ರಾಯವನ್ನು ಅಸಂದಿಗ್ಧವಾಗಿ, ಖಚಿತವಾಗಿ ತಿಳಿಸಿದ. ಶ್ರೀರಾಮಚಂದ್ರ ತನ್ನದೇ ಆದರ್ಶಗಳನ್ನು ಹೊಂದಿದ್ದು, ಹನುಮಂತನ ಸಲಹೆಯಂತೆಯೇ ನಡೆದಿರಬಹುದು. ಆದರೂ ಹನುಮಂತನ ಹಿರಿಮೆ, ತನ್ನ ಖಚಿತ ಅಭಿಪ್ರಾಯವನ್ನು ಅಷ್ಟೇ ಖಚಿತವಾಗಿ ಹೇಳುವುದರಲ್ಲಿ ವ್ಯಕ್ತವಾಗುತ್ತದೆ.

ಇಂದಿನ ಸಾಮಾಜಿಕ ಸಾಂಸ್ಕೃತಿಕ ಆರ್ಥಿಕ ಅಭಿವೃದ್ಧಿಯ ಅಗತ್ಯದಲ್ಲಿ ಹನುಮಂತನಂತಹ ಅನುಚರ ಗಣದ ಅಗತ್ಯ ಎಂದಿಗಿಂತ ಹೆಚ್ಚಾಗಿದೆ. ದಾಸೋಹಂ ಕೋಸಲೇಂದ್ರಸ್ಯ-ಎಂದು ಹನುಮಂತ ಹೇಳಿಕೊಂಡರೂ ಅದು ವಿನಯದಿಂದ, ಬುದ್ಧಿಯಿಂದ, ಪರಿಪೂರ್ಣ ಅರ್ಪಣಾ ಮನೋಭಾವದಿಂದ ಕೂಡಿದ್ದು, ಅಂತಹ ಗುರಿಯು ದಿಟ್ಟಿ ಕಳೆದುಕೊಳ್ಳದೆ ನಡೆವ ಹಿಂಬಾಲಕರ- ಅನುಯಾಯಿಗಳ ಅಗತ್ಯವಿದೆ, ಎಲ್ಲರೂ ನಾಯಕರಾಗಲು ಪ್ರಯತ್ನಿಸುತ್ತಿರುವ ಈ ಸಂದಿಗ್ಧ ಸಮಯದಲ್ಲಿ.

ಅಕ್ಷ ಹಂತಾರನೂ, ವಾರಾಶಿಯನ್ನು ದನಗೊರಸು ನೀರೆಂದು ದಾಂಟಿದವನೂ, ಶ್ರೀರಾಮದೂತನೂ, ಆದ ಆಂಜನೇಯ ನಮಗೆ ತನ್ನ ಹಾದಿಯಲ್ಲಿ ನಡೆವ ಬುದ್ಧಿ ನೀಡಲೆಂದು ಬೇಡುವ.

# ಮಹಾರಾಷ್ಟ್ರದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ

**ಶ್ರೀ ಆದ್ಯರಾಮಾಚಾರ್ಯ**

ಏಳು ಪರ್ವತಗಳ ಮಧ್ಯದಲ್ಲಿ ವಿರಾಜಮಾನನಾಗಿ ಭಕ್ತರಿಂದ ಪೂಜೆಗೊಳ್ಳುತ್ತಿರುವ ಶ್ರೀನಿವಾಸನ ಮಹಿಮೆಯನ್ನು ಆದಿಶೇಷ ನಿಂದಲೂ ವರ್ಣಿಸಲು ಅಸಾಧ್ಯ. ಭಕ್ತಪರಾಧೀನ ಎಂದೆನಿಸಿಕೊಂಡ ನಮ್ಮ ವೇಂಕಟೇಶನು ಇಂದು ನವನಾಗರೀಕತೆಯ ಸುಖೋಪಭೋಗಗಳಲ್ಲಿ ತನ್ಮಯರಾಗಿ ಅಶಾಂತಿಯ ಮಡುವಿನಲ್ಲಿ ಸಿಕ್ಕು ತೊಳಲಾಡುತ್ತಿರುವ ತನ್ನ ಭಕ್ತರನ್ನು ಉದ್ಧಾರಮಾಡಲು ಅಮೇರಿಕಾ ಆಫ್ರಿಕಾದೇಶಗಳಿಗೂ ಪ್ರಯಾಣ ಮಾಡಿದ್ದು ಅಲ್ಲಿರುವ ಭಕ್ತರಿಂದ ಪೂಜೆಗೊಂಡು ಅವರ ಇಷ್ಟಾರ್ಥಗಳನ್ನು ಪೂರೈಸುತ್ತಿರುವ ವಿಚಾರವನ್ನು ಇಂದು ಎಲ್ಲರೂ ಬಲ್ಲವರಾಗಿದ್ದಾರೆ.

ಹಿಂದು ಕಾಲದಲ್ಲಿ ತಮ್ಮ ಆರಾಧ್ಯದೈವದ ಪ್ರೀತ್ಯರ್ಥವಾಗಿ ಅವರು ವಾಸಿಸುತ್ತಿದ್ದ ಸ್ಥಳಕ್ಕೆ ತಾನೇ ಹೋಗಿ ಅವರೆಲ್ಲರೂ ಭಕ್ತಿಯಿಂದ ನಾರಿಕೇಲಫಲವನ್ನು ಸಮರ್ಪಿಸಿದರೆ ಸಾಕು ಎಂದು ಸಾರಲು ಆದಿವಾಸಿ ಜನರ ಮಧ್ಯದಲ್ಲಿ ಹೋಗಿನಿಂತು ಅವರಿಂದ ಪೂಜೆಗೊಳ್ಳುತ್ತಿರುವ ವಿಷಯವು ಮಾತ್ರ ತಿಳಿಯದ ವಿಚಾರವೆಂದೇ ಹೇಳಬಹುದಾಗಿದೆ.

ಈ ಘಟನೆಯು ಇಂದು ನಿನ್ನೆಯದಲ್ಲ ಮುನ್ನೂರು ವರುಷಗಳ ಹಿಂದೆ ಮಹಾರಾಷ್ಟ್ರದ ಗಡಿ ಭಾಗದಲ್ಲಿ ನಡೆದುದೆಂಬುದನ್ನು ತಿಳಿದಾಗ ಎಂಥವರಿಗೂ ಅಚ್ಚರಿಯಾಗದಿರದು.

ಛತ್ರಪತಿ ಶಿವಾಜಿ ಮಹಾರಾಜರ ತಾಯಿಯ ತವರು ಸಿಂಧಖೇಡ ಎಂಬುದು. ಇದು ವರಹಾಡ್ ಹಾಗೂ ವಿದರ್ಭಗಳ ಭಾಗದಲ್ಲಿದೆ. ದೇವಳಗಾಂ ಎಂಬುದು ಜೀಜಾಬಾಯಿಯ ತವರು ಮನೆಯವರಿಗೆ ಸೇರಿದ ಒಂದು ಹಳ್ಳಿ. ಇವಳ ತಂದೆ ಲಖೂಜಿರಾವ್ ಗಾಯಕವಾಡರು. ಇವರ ತಮ್ಮನ ಹೆಸರು ಜಗದೇವರಾವ್ ಗಾಯಕವಾಡ ಎಂದಿದ್ದು ಈತನು ಮೊಗಲ್ ಸಮ್ರಾಟ ಔರಂಗಜೇಬನ ದರ್ಬಾರಿನಲ್ಲಿ ಮೂರು ಸಾವಿರ ಸೇನೆಯ ಸರದಾರನಾಗಿದ್ದ. ಕಾಲಾಂತರದಲ್ಲಿ ಮಹಾರಾಷ್ಟ್ರದಲ್ಲಿರುವ ಬ್ರಹ್ಮಪುರಿ ಎಂಬ ಸ್ಥಳದಲ್ಲಿಯೇ ಕಾಲವಾದ (ಕಾಲ 1703)

ಈ ಜಗದೇವರಾಯನು ತಿರುಮಲಾಧೀಶನ ಪರಮ ಭಕ್ತನಾಗಿದ್ದ. ತನ್ನ ಜೀವಿತಾವಧಿಯಲ್ಲಿ ಅನೇಕಸಲ ತಿರುಮಲೆಯವರೆಗೆ ಬಂದು ದೇವನದರ್ಶನವನ್ನು ಪಡೆದು ನಾನಾ ರೀತಿಯ ಸೇವೆಮಾಡಿದವನಾಗಿದ್ದ. ಒಂದುಸಲ ಸ್ವಾಮಿಯು ಆತನೊಂದಿಗೆ ತಾನೂ ಬರುವದಾಗಿ ಸ್ವಪ್ನದಲ್ಲಿ ಸೂಚನೆ ಮಾಡಿದನಂತೆ. ಕಾಲಾಂತರದಲ್ಲಿ ಆ ದೇವನ ಆಜ್ಞಾನುಸಾರವಾಗಿ ದೇವಳಗಾಂ ಎಂಬಲ್ಲಿ ಶ್ರೀ ವೇಂಕಟೇಶನ ದೇವಮಂದಿರವು ನಿರ್ಮಾಣವಾಗುವಂತಾಯಿತು. ಈ ದೇವಳಗಾಂ ಎಂಬುದು



ಚಂದ್ರಾಪುರ ಎಂಬ ಜಿಲ್ಲೆಗೆ ಸೇರಿದ ಭಾಗವಾಗಿದೆ. ಖನಿಜ ಸಂಪತ್ತುಗಳಿಗೆ ಆಗರವೆನಿಸಿದೆ. ಅನೇಕ ಕಲ್ಲಿದ್ದಲಿನ ಕಣಿವೆಗಳು ಈ ಭಾಗದಲ್ಲಿವೆ. ಬಹುದಟ್ಟವಾದ ಅರಣ್ಯದಿಂದ ಕೂಡಿದ ಈ ಭಾಗದಲ್ಲಿ ಸಾವಿರಾರು ವರುಷಗಳಿಂದ ಆದಿವಾಸಿ ಜನಾಂಗವು ವಾಸವಾಗಿದೆ. ಈ ಜನರನ್ನು ಗೋಂಡ ಎಂಬ ಹೆಸರಿನಿಂದ ಕರೆಯುತ್ತಾರೆ.

ಹಿಂದು ಕಾಲದಲ್ಲಿ ಈ ಭಾಗದ ಜಿಲ್ಲಾಧಿಕಾರಿಗಳೆಂದು ಡಾ|| ಸೇತುಮಾಧವರಾವ್ ಪಗಡಿಯವರನ್ನು ನಿಯಮಿಸಲಾಯಿತು. ಇವರು ಇತಿಹಾಸಶೋಧಕರು. ಹದಿನಾಲ್ಕು ಭಾಷೆಗಳಲ್ಲಿ ಪರಿಣಿತರು. ಗೋಂಡ ಜನಾಂಗದ ಭಾಷೆಯನ್ನು ಅವಲೋಕಿಸಿದಾಗ ಅವರು ಬಳಸುತ್ತಿದ್ದ ಭಾಷೆಯಲ್ಲಿ ಅನೇಕ ಕನ್ನಡ ಪದಗಳಿರುವುದನ್ನು ಗಮನಿಸಿ ಬಹು ಅಚ್ಚರಿಪಟ್ಟರು. ಮುಂದೆ ಶ್ರೀಯುತರು ಸಾಕಷ್ಟು ಪರಿಶ್ರಮ ಪಟ್ಟು ಗೊಂಡ ಹಾಗೂ ಕೋಲಾಮಿ ಭಾಷೆಯಲ್ಲಿ ವ್ಯಾಕರಣವನ್ನು ರಚಿಸಿದರು. ಭಾಷಾಪಂಡಿತರಿಗೆ ಅವರ ಗ್ರಂಥಗಳು ಮಾರ್ಗದರ್ಶಿಯಾಗಿರುವುವು. ಈ ಮಹಾಶಯರು ಕರ್ನಾಟಕರಾಜ್ಯದ ಬಿಜಾಪುರ ಜಿಲ್ಲೆಗೆ ಸೇರಿದವರಾಗಿದ್ದು ನಿಜಾಂ ಸರ್ಕಾರದ ಚಾಕರಿಯಲ್ಲಿದ್ದು ಪ್ರಾಂತ ಪುನರ್ವಿಂಗಡೆಯಾದಾಗ ಮಹಾರಾಷ್ಟ್ರದ ರಾಜಧಾನಿಯಾದ ಮುಂಬೈಗೆ ಹೋಗಿ ಅನೇಕ ಖಾತೆಗಳಲ್ಲಿ ಸೇವೆಸಲ್ಲಿಸಿ ಈಗ ನಿವೃತ್ತರಾಗಿದ್ದಾರೆ.

ಪೇಣಗಂಗಾ, ವರ್ಧಾನದಿಗಳ ಸಂಗಮಸ್ಥಾನದಲ್ಲಿ ಚಂದ್ರಪುರವಿದೆ. ದಕ್ಷಿಣದಿಕ್ಕಿಗೆ ಹರಿವ ಈ ಜಲಪ್ರವಾಹವು ಮುಂದೆ ಗೋದಾವರಿ ನದಿಯನ್ನು ಕೂಡಿಕೊಂಡು ಭದ್ರಾಚಲದತ್ತ ಹರಿಯುತ್ತದೆ.

ನಾಗಪುರದ ಭೋಸಲೆಮನೆತನದವರು 1730 ರಲ್ಲಿ ಚಂದ್ರಪುರವನ್ನು ಸ್ವಾಧೀನಪಡಿಸಿಕೊಂಡರು. ಗೋಂಡ ಜನಾಂಗವರೆಲ್ಲ ಕಾಡುನಿವಾಸಿಗಳೇ ಆದರೂ ಮಹಾಶೂರರು ಹಿಳ್ಳೇಬಿಲ್ಲಾಳುಗಳು. ಜಹಂಗೀರನಕಾಲದಲ್ಲಿ ಅನೇಕಸಲ ಮೊಗಲರೊಂದಿಗೆ ಹಣಾಹಣಿ ಹೋರಾಡಿದವರು. ಮೊಗಲರಿಗೆ ಎಂದೂ

ಸೊಪ್ಪು ಹಾಕದಿದ್ದವರು ಆದರೆ ಭೋಸಲೆಗಳೊಂದಿಗೆ ಒಪ್ಪಂದವಾದನಂತರ ಅವರು ಈ ಭಾಗದಲ್ಲಿ ಶ್ರೀವೆಂಕಟೇಶ ದೇವನನ್ನು ಪ್ರತಿಷ್ಠಾಪಿಸುವ ಸಂಕಲ್ಪವನ್ನು ಮಾಡಿದರು. ಈ ಮನೆತನದ ರಘೋಜಿಭೋಸಲೆ ಎಂಬಾತನು ಮೈಸೂರಿನ ಸಮೀಪದಲ್ಲಿರುವ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಲು ಹೊರಡುವಾಗ ಮೊದಲು ಆತನು ಕಡಪಾದ ನವಾಬರಿಂದ ಖಂಡಣಿಯ ಹಣವನ್ನು ವಸೂಲಿ ಮಾಡಿಕೊಂಡ. ಆ ಕಾಲದಲ್ಲಿ ಶ್ರೀ ಉದುತ್ತರಾದಿ ಮಠದಲ್ಲಿ ಶ್ರೀಸತ್ಯಪ್ರಿಯ ತೀರ್ಥರೆಂಬ ಯತಿಗಳಿದ್ದರು.

ಛತ್ರಪತಿ ಸಾಂಭಾಜಿರಾಜನ ಮಗನಾಗಿದ್ದ ಸಾಹೂರಾಜನ ಹೆಂಡತಿ ಹಾಗೂ ಈ ರಘೋಜೀ ಭೋಸಲೆ– ಈತನ ಹೆಂಡತಿ – ಇವರಿಬ್ಬರೂ ಅಕ್ಕ ತಂಗಿಯರೆನಿಸಿ ಕೊಳ್ಳುತ್ತಿದ್ದರು. ರಘೋಜಿ ಭೋಸಲೆ - ಈತನಿಗೆ ಶ್ರೀ ಸತ್ಯಪ್ರಿಯರಲ್ಲಿ ಅಪಾರವಾದ ವಿಶ್ವಾಸವಿತ್ತು. ತಾನು ಯುದ್ಧಕ್ಕೆ ಹೊರಡುವಾಗ ಆತನು ಸ್ವಾಮಿಗಳು ಬಿಡಾರ ಮಾಡಿದ್ದ ರಾಯಚೂರಿನ ವರೆಗೆ ಬಂದು ತನಗೆ ಆಶೀರ್ವದಿಸಬೇಕೆಂದು ಕೇಳಿಕೊಂಡ. ಶಿಷ್ಯನ ಪ್ರಾರ್ಥನೆಯನ್ನು ಮನ್ನಿಸಿದ ಶ್ರೀಗಳವರು ಆತನಿಗೆ ಬಂಗಾರದ ಶ್ರೀರಾಮನ ವಿಗ್ರಹವನ್ನು ಆಶೀರ್ವದಿಸಿ ಅನುಗ್ರಹಿಸಿದರು. ಆಗ ರಘೋಜಿ ಭೋಸಲೆ ಛತ್ರಪತಿ ಸಾಹುರಾಜನಿಗೆ ಒಂದು ಪತ್ರವನ್ನು ಬರೆದು ತನಗೆ ಮಹಾತಪಸ್ವಿಗಳಾಗಿರುವ ಶ್ರೀ ಸತ್ಯ ಪ್ರಿಯತೀರ್ಥರಿಂದ ಶ್ರೀರಾಮನ ವಿಗ್ರಹವು ಪ್ರಾಪ್ತವಾಗಿದ್ದು ಇನ್ನು ಮುಂದೆ ತಾನು "ರಾಘವ ಪದಾಂಭೋಜ" ಎಂಬ ಅಂಕಿತವನ್ನು ಮೊಹರಿನರೂಪದಲ್ಲಿ ಬಳಸಲು ಅಪ್ಪಣೆಯನ್ನೀಯಬೇಕಾಗಿ ಲಿಖಿತರೂಪದಲ್ಲಿ ಪ್ರಾರ್ಥನೆಯನ್ನು ಮಾಡಿಕೊಂಡ. ಆಗ ಸಾಹು ರಘೋಜಿಯ ,ಈ ಪ್ರಾರ್ಥನೆಗೆ ತಾನು ಒಪ್ಪಿಗೆಯನ್ನಿತ್ತಿರುವುದಾಗಿ ಬರೆದು ಕಳಿಸಿದ, ಅತ್ಯಂತ ಮಹತ್ತ್ವಪೂರಿತವಾದ ಈ ಕಾಗದ ಪತ್ರಗಳನ್ನು ಇಂಗ್ಲಂಡದಲ್ಲಿರುವ ಇಂಡಿಯಾ ಹೌಸಿನಲ್ಲಿ ಇಂದಿಗೂ ನೋಡಬಹುದಾಗಿದೆ.

ರಘೋಜಿಯು ಮುಂದೆ ದೇವಳಗಾಂ ಎಂಬಲ್ಲಿ ವೆಂಕಟೇಶನ ದೇವಾಲಯವನ್ನು ಕಟ್ಟಿಸಿದ. ತಿರುಪತಿಯ ನಿವಾಸಿಗಳಾಗಿದ್ದ ಪಂಡಿತ ವಿಜಯರಾಘವಾಚಾರ್ಯರೆಂಬ ಪೂಜ್ಯರನ್ನು ಕರೆಸಿಕೊಂಡು ಎರಡು ಗ್ರಾಮಗಳನ್ನು ಆ ಪೂಜ್ಯರಿಗೆ ದಾನಮಾಡಿದ, ಅದೇ ರೀತಿಯಾಗಿ ತಿರುಮಲಾಧೀಶನಾದ ಶ್ರೀ ವೇಂಕಟೇಶ್ವರಸ್ವಾಮಿಯ ಹೆಸರಿನಲ್ಲಿಯೂ ಒಂದು ಗ್ರಾಮವನ್ನು ಉಂಬಳಿಯಾಗಿ ಬಿಟ್ಟ.

ಒಂದು ಸಲ ಕಾಶಿಯ ಪಂಡಿತರೊಬ್ಬರು ನಾಗಪುರದವರೆಗೆ ಆಗಮಿಸಿ ತಮ್ಮೊಂದಿಗೆ ಆಧ್ಯಾತ್ಮ ಪರವಾದ ವಾಗ್ವಿವಾದದಲ್ಲಿ ಸರಿಸಮನಾದವರು ಯಾರಾದರೂ ಇದ್ದಲ್ಲಿ ಮುಂದೆ ಬನ್ನಿರಿ ಎಂದು ಆಹ್ವಾನವನ್ನು ನೀಡಿದರು. ರಘೋಜಿಯ ದರ್ಬಾರಿನಲ್ಲಿ ಪಂಡಿತ ವಿಜಯ ರಾಘವಾಚಾರ್ಯರಿಗೂ ಕಾಶಿಯ ಪಂಡಿತರಿಗೂ ಅನೇಕ ದಿನಗಳವರೆಗೆ ವಾಗ್ವಾದವಾಯಿತು. ವಿಜಯರಾಘವಾಚಾರ್ಯರ ಪಾಂಡಿತ್ಯವನ್ನು ಮೆಚ್ಚಿದ ರಾಜನು ಅವರನ್ನು ಅಮೋಘವಾದ ರೀತಿಯಲ್ಲಿ ಸನ್ಮಾನವನ್ನು ಮಾಡಿದ

ಭೋಸಲೆ ಮನೆತನದವರಿಂದ ಪ್ರತಿಷ್ಠಾಪಿಸಲ್ಪಟ್ಟ ಶ್ರೀವೆಂಕಟೇಶನೇ ಗೋಂಡಜನಾಂಗದ ಕುಲದೈವವಾಗಿ ಪೂಜೆಸ್ವೀಕರಿಸ ತೊಡಗಿದ. ಬಹುಕಾಲದಿಂದ ನರಬಲಿಯನ್ನೀಯುತ್ತಿದ್ದ ಈ ಜನರು–ಶ್ರೀನಿವಾಸನ ಭಕ್ತರಾಗಿ ನಾರಿ ಕೇಳ ಫಲ ಸಮರ್ಪಣೆಯಿಂದ ಆತನ ಅನುಗ್ರಹ ಪ್ರಸಾದವನ್ನು ಹೊಂದ ತೊಡಗಿದರು. ಯಾವ ರೀತಿಯಾಗಿ ತಿರುಪತಿಯಲ್ಲಿ ಪೂಜಾದಿಗಳು ನಡೆಯುವವೊ ಅದೇರೀತಿಯಲ್ಲಿ ಈ ದೇವನಿಗೂ ಪೂಜಾದಿಗಳು ಸಲ್ಲುವವು, ರಾಜನು ದೇವಾಲಯದ ಕರ್ಮಚಾರಿಗಳಿಗೆಲ್ಲ ಅವರವರ ಕೆಲಸಕಾರ್ಯಗಳಿಗೆ ತಕ್ಕಂತೆ ಇನಾಮುಗಳನ್ನು ಹಾಕಿಕೊಟ್ಟಿದ್ದ. ಇಂದಿಗೂ ಈ ದೇವನ ಉತ್ಸವಕಾಲದಲ್ಲಿ ಲಕ್ಷಾಂತರ ಭಕ್ತರು ಬಂದು ಸೇರುತ್ತಾರೆ ಅದರಲ್ಲಿ ಗೋಂಡ್ ಜನಾಂಗದ ವರ್ಗವೇ ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಇತ್ತೀಚೆಗೆ ದೇವಳಗಾಂ ಶ್ರೀ ವೆಂಕಟೇಶ್ವರಸ್ವಾಮಿ ಟ್ರಸ್ಟ್ ಕಮಿಟಿ ಎಂಬ ಹೆಸರಿನಲ್ಲಿ ವಿಶ್ವಸ್ಥ ಕಮಿಟಿ ಒಂದು ರಚನೆಯಾಗಿದ್ದು ಆ ಕಮಿಟಿಯವರೇ ಎಲ್ಲ ವ್ಯವಸ್ಥೆಗಳನ್ನು ನೋಡಿಕೊಂಡು ಹೋಗುತ್ತಲಿದ್ದಾರೆ.

ಮಹಾರಾಷ್ಟ್ರದಲ್ಲಿರುವ ಈ ದೇವಳಗಾಂದಲ್ಲಿರುವ ಶ್ರೀವೆಂಕಟೇಶನ ದೇವಾಲಯದ ಹೊರತಾಗಿ ವಾಶೀಮ್ ಎಂಬ ಗ್ರಾಮದಲ್ಲಿಯೂ ಸಹ ಪುರಾತನವಾದ ಒಂದು ದೇವಾಲಯವಿದೆ. ಈ ದೇವಾಲಯವನ್ನೂ ಸಹ ಭೊಸಲೇ ಮನೆತನದವರೇ ಕಟ್ಟಿಸಿದರೆಂದ ತಿಳಿದು ಬರುತ್ತದೆ. ವಾಶೀಮ್ ಎಂಬುದು ವತ್ಸಗುಲ್ಮ ಎಂಬ ಸಂಸ್ಕೃತದ ಅಪಭ್ರಂಶ ಪದವಾಗಿದೆ. ರಾಜಶೇಖರ ಪಂಡಿತನು ಈ ವತ್ಸಗುಲ್ಮದವನಾಗಿದ್ದನೆಂದು ತಿಳಿದುಬರುತ್ತದೆ. ಇದು ಅಕೋಲಾಜಿಲ್ಲೆಯಲ್ಲಿದೆ, ನಿಜಾಂಶಾಹಿಯ ಗಡಿಭಾಗದಿಂದ ಹನ್ನೆರಡು ಮೈಲಿನ ಅಂತರದಲ್ಲಿದೆ. ಇಲ್ಲಿರುವ ಮಂದಿರವನ್ನು ಬಾಲಾಜಿ ಮಂದಿರ ಎಂದು ಕರೆಯುವ ಸಂಪ್ರದಾಯವಿದೆ 1740ರ ಸುಮಾರಿನಲ್ಲಿ ಈ ದೇವನ ಮಂದಿರವನ್ನು ಕಟ್ಟಲಾಯಿತೆಂದು ತಿಳಿದು ಬರುತ್ತದೆ.

ಇನ್ನು ಮಹಾರಾಷ್ಟ್ರದ ರಾಜಧಾನಿ ಎಂದೆನಿಸಿ ಕೊಳ್ಳುವ ಮುಂಬೈ ಮಹಾನಗರದಲ್ಲಿಯೇ ಘಾಣಸವಾಡಿ ಎಂಬ ಬಡಾವಣೆಯಲ್ಲಿ ಅತ್ಯಂತ ಭವ್ಯವಾದ ಹಾಗೂ ಸುಂದರವಾದ ಶ್ರೀವೆಂಕಟೇಶನ ದೇವಾಲಯವಿದೆ. ಅರ್ಚನೆ ಹಾಗೂ ನೈವೇದ್ಯಾದಿಗಳೆಲ್ಲ ತಿರುಮಲೆಯಲ್ಲಿ ನಡೆಯುವಂತೆಯೇ ಇಲ್ಲಿಯೂ ಸಾಗುತ್ತಲಿವೆ. ಇಡೀ ಮುಂಬಯಿ ಮಹಾನಗರದ ಭಕ್ತರು ಈ ದೇವಾಲಯಕ್ಕೆ ಬಂದು ಹೋಗುತ್ತಾರೆ. ಹೀಗೆ ಸುಮಾರು ಮುನ್ನೂರುವರುಷಗಳ ಹಿಂದೆಯೇ ನಮ್ಮ ತಿರುಮಲಾಧೀಶನಾದ ಶ್ರೀನಿವಾಸನು ಮಹಾರಾಷ್ಟ್ರದಲ್ಲಿಯೂ ಜನಪ್ರಿಯದೇವನೆಂದು ಪೂಜೆಗೊಳ್ಳುತ್ತಿರುವದನ್ನು ಕೇಳಿದಾಗ ಎಂಥವರಿಗೂ ಆ ದೇವನ ಮಹಿಮಾತಿಶಯಗಳಲ್ಲಿ ಭಕ್ತಿಭಾವಗಳು ಮೂಡದೆ ಇರಲಾರವು.

× ×

# ಅನ್ಯಮಾರ್ಗವ ತಿಳಿಯೆನಯ್ಯ

ಸ್ವರ್ಣಶ್ರೀ ಭೂಪಾಳಂ

ನಿನಗೆ ನಾಗೈದ ಮಹಾಪರಾಧವಾದರೂ ತಾನೇ ಏನು ?
ನಿನ್ನ ಕರೆಗಾಗಿ ನಾ ಕಾತರಿಸಿ ಕಾಯುತಿಲ್ಲವೇನು ?
ನೀ ಕಾಣದಂತಿರುವೀ ನಡುವಿನ ತೆರೆಯ ಸರಿಸಬಾರದೇನು ?
ನಾ ಕೇಳಿ ತಿಳಿದಿಹೆ 'ಕಾರುಣ್ಯವಾರಿಧಿ' ಯಂತೆ ನೀನು
ನಿನ್ನ ಕಾರುಣ್ಯವರ್ಷದಿ ನನ್ನ ತಮ ಕಳೆಯಬಾರದೇನು ?
"ನಿನ್ನ ಕರ್ಮದಂತೆ" ಎಂದರೆ ನಾ ನಂಬಿ ಬಿಡಬೇಕೇನು ?
ಕ್ಷಣದಿ ಕರ್ಮಕಳೆದು ಕಾಯಬಲ್ಲವ ನೀನೆಂದು ಬಲ್ಲೆನಾನು
ಗಂಗಾಪ್ರವಾಹದಂತೆ ಅಮಿತ ಪುನೀತವಂತೆ ನಿನ್ನೊಲವಿನ ಜೇನು
ಅಂಗನೆಯ ಪಾಪಗಳ ದಯದಿಂದ ತೊಳೆಯಬಾರದೇನು ?
ಸಂಕಲ್ಪ ಮಾತ್ರದಿಂದೀ ಜಗವ ನಡೆಸ ಸೂತ್ರಧಾರನಂತೆ ನೀನು
ನಿನ್ನ ಕೃಪಾಪರಿಧಿಗೆ ಸೇರೆ ನಾನೊಬ್ಬಳು ಹೊರತೇನು ?
ಮಹಾಜ್ಞಾನಿ ಮಹಾಶರಣೆ ಮಹಾಭಕ್ತೆ ಏನೂ ಅಲ್ಲ ನಾನು
ಆದರೇನು ನಿನ್ನನೇ ಅನವರತ ನಂಬಿರುವುದು ಸುಳ್ಳೇನು ?
ನೀನೆಮ್ಮೆಡೆಗೆ ಬರಲು ಆಗುತಿಹ ಈ ವಿಳಂಬದ ಪರಿಯೇನು ?
ಭಕುತರೊಂದಿಗೆ ನಿನಗೆ ನಿಷ್ಠುರದ ನಡೆಯು ಸರಿಯೇನು ?
ನಿನ್ನ ಕಾಣುವ ಭಾಗ್ಯಕೆ ಕೊರತೆಯಾಗುವ ಶಾಪವಾದರೂ ಏನು ?
ಹೀಗಾದ ಮಾತ್ರಕೆ ನಾನು ದೂರು ಹೋಗುವನೆಂದು ಕೊಂಡಿ
ಹೆಯೇನು ?

ಏನಾದರೇನು! ನಿನ್ನ ಚರಣಯುಗ್ಮವನೆಂದೂ ಬಿಡೆನು ನಾನು
ಇವನುಳಿದು ಅನ್ಯ ಮಾರ್ಗವ ತಿಳಿಯೆನಯ್ಯ ನಾನು
"ಸ್ವರ್ಣ" ಗುಣಾರ್ಣವ ಈ ಭವದಿಂದ ಪಾರು ಮಾಡಬಾರದೇನು ?



# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಶ್ರೀಮದಾಂಜನೇಯ

ಶ್ರೀಮತಿ ಜಯಶ್ರೀ ಆರ್ತಿಕಜೆ

ಆಂಜನೇಯನು ಶ್ರೀರಾಮಚಂದ್ರನ ಅತ್ಯಂತ ನಿಕಟ ವರ್ತಿಯಾದ ಭಕ್ತನಾಗಿದ್ದನು. ಎಲ್ಲಿ, ಯಾವಾಗ ಶ್ರೀರಾಮಚಂದ್ರನು ಪೂಜಿಸಲ್ಪಡು‍ವನೋ ಆಗ, ಅಲ್ಲಿ ಅವನ ಪಕ್ಕದಲ್ಲಿ ಆಂಜನೇಯನೂ ಆರಾಧಿಸಲ್ಪಡುವನು. ಏಕೆಂದರೆ, ಆಂಜನೇಯನ ತನು-ಮನಗಳೆಲ್ಲವೂ ಸ್ವಾಮಿಯ ಸೇವೆಗಾಗಿಯೇ ಎನ್ನುವಂತಿತ್ತು. ಆತನೇ ತನ್ನ ಸರ್ವಸ್ವ ಎಂದು ತಿಳಿದಿದ್ದನು. ಆತನು ಬದುಕಿರುವುದೂ ಶ್ರೀರಾಮನಿಗಾಗಿಯೇ, ಯುದ್ಧಮಾಡಿ ಮಹಾವೀರರನ್ನು ಸದೆಬಡಿದುದೂ ಶ್ರೀರಾಮನಿಗಾಗಿಯೇ. ಆದ್ದರಿಂದ ಶ್ರೀರಾಮನನ್ನೂ ಆಂಜನೇಯನನ್ನೂ ಬೇರೆ ಬೇರೆ ಮಾಡಲು ಯಾರಿಂದಲೂ ಸಾಧ್ಯವಿರಲಿಲ್ಲ. ಶ್ರೀರಾಮನಿಲ್ಲದಿದ್ದರೆ ಆಂಜನೇಯನಿಲ್ಲ, ಆಂಜನೇಯನಿಲ್ಲದಿದ್ದರೆ ಶ್ರೀರಾಮನಿಲ್ಲ.

ಒಂದು ದಿನ ಶ್ರೀರಾಮನು ಆಂಜನೇಯನಲ್ಲಿ ಈ ಮಮತೆಯ ಕಾರಣವನ್ನು ಕೇಳಿದನು. ಅದಕ್ಕೆ ಆಂಜನೇಯನು "ದೇಹಾತ್ಮವಾಗಿಯು ಜೀವಾತ್ಮನಾಗಿಯೂ ನಾನು ನಿನ್ನವನೇ, ನಿನ್ನ ಸೇವೆಗಾಗಿಯೇ ಇಹೆನು" ಎಂದಿರುವನು. ಆತನು ಯಾವ ಕಾಲದಲ್ಲೂ ಯಾವ ವೇಳೆಯಲ್ಲೂ ಶ್ರೀರಾಮಚಂದ್ರನ ಕುರಿತೇ ಧ್ಯಾನಿಸುತ್ತಿದ್ದನು.

ಯತ್ರ ಯತ್ರ ರಘುನಾಥ ಕೀರ್ತನಮ್  
ತತ್ರ ತತ್ರ ಕೃತ ಮಸ್ತಕಾಂಜಲಿಮ್  
ಬಾಷ್ಪವಾರಿ ಪರಿಪೂರ್ಣ ಲೋಚನಮ್  
ಮಾರುತಿಮ್ ನಮತ ರಾಕ್ಷಸಾಂತಕಮ್

ಮರುತ ಪುತ್ರನಾದ ಆಂಜನೇಯನು ಶ್ರೀರಾಮನ ಪಕ್ಕದಲ್ಲಿ ತಲೆಬಾಗಿ ಕೈಮುಗಿದು ಕುಳಿತಿರುವನು. ಕಣ್ಣುಗಳಲ್ಲಿ ಆನಂದಾಶ್ರುಗಳನ್ನು ಸುರಿಸುತ್ತಲಿರುವನು, ಎಲ್ಲಿ ಶ್ರೀರಾಮನಿರುವನೋ ಅಲ್ಲಿಯೇ ಆತನೂ ಇರುವನು, ರಾಕ್ಷಸರನ್ನು ಸರ್ವನಾಶಮಾಡಿದ ಆತನಿಗೇ ನಮ್ಮ ಸೇವೆಯು ಅರ್ಪಿತವಾಗಿದೆ.

ಶ್ರೀರಾಮನು ಹನುಮಂತನಿಗೆ ಸ್ವತಃ ಬ್ರಹ್ಮಜ್ಞಾನವನ್ನು ಬೋಧಿಸಿದನು. ವೇದಾಂತಶಾಸ್ತ್ರವನ್ನು ಅಭ್ಯಸಿಸುವಂತೆಯೂ ಹೇಳಿರುವನು. ವೇದಾಂತ ಶಾಸ್ತ್ರದಲ್ಲಿ, ಜೀವನು ಜೀವನ್ಮುಕ್ತನಾಗಲು ಯಾವಯಾವ ಮಾರ್ಗವನ್ನು ಅನುಸರಿಸಬೇಕೆಂಬ ವಿಧಾನವನ್ನು ಹೇಳಿದೆ. ಮುಖ್ಯವಾಗಿ ಅವುಗಳಲ್ಲಿ ನಾಲ್ಕು ವಿಧಗಳಿವೆ. ಅವುಗಳೇ, ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ ಮತ್ತು ಸಾಯುಜ್ಯ. ಈ ವಿಧಾನವನ್ನು ಶ್ರದ್ಧಾಪೂರ್ವಕವಾಗಿ ಅನುಸರಿಸಿದಾತನು ಸಂಸಾರಸಾಗರದಿಂದ ಮುಕ್ತನಾದಂತೆಯೇ- ಇದಲ್ಲದೆ ಕೈವಲ್ಯ ಮುಕ್ತಿಯ ಕುರಿತೂ ಹೇಳಿರುವನು. ಎಂದರೆ ಯಾವಾತನು ಜ್ಞಾನಯೋಗದಲ್ಲಿಯೇ ನಿರತನಾಗಿರುವನೋ ಆತನು ಪರಮಾತ್ಮನೊಂದಿಗೆ ವಿಲೀನಗೊಳ್ಳುವನು. ಒಂದು ಜೀವವು ನಾಶವಾಗಿ ಹೊಸಜೀವವನ್ನು ಪಡೆಯುವುದು ಎಂದರೆ ವೇದಮುಕ್ತಿ ಎಂದು ಕರೆಯಲ್ಪಡುವುದು. ಇಹದಲ್ಲಿರುವ ಯಾವ ವಸ್ತುವಿನ ಮೇಲೆಯೂ ಮೋಹವಿರಿಸದೆ ಪರಮಾತ್ಮನನ್ನೇ ಸೇರಬಯಸುವವನು, ಅಥವಾ ಪರಮಾತ್ಮನ ಧ್ಯಾನದಲ್ಲಿಯೇ ನಿರತನಾಗಿರುವವನು ಜೀವನ್ಮುಕ್ತನಾಗಲು ಅರ್ಹನು. ಯಾವಾತನು ತಾನು, ತನ್ನವರೆಂಬ ಮಮಕಾರ ಪಡುತ್ತಲಿರುವನೋ ಆತನು ಜನನ – ಮರಣಗಳೆಂಬ ಜಂಜಾಟದಲ್ಲಿ ಸಿಲುಕಿದಂತೆಯೇ.

ಧ್ಯಾನವು ಮಾನವನ ಮನಸ್ಸನ್ನು ಪರಿಶುದ್ಧಗೊಳಿಸುವುದು, ಎಂದರೆ ಏಕಾಂತಶಕ್ತಿಯಲ್ಲಿ ಮನಸ್ಸು ಕೇಂದ್ರೀಕೃತಗೊಳ್ಳುವುದು. ಆತನು ಶುದ್ಧ ಮನಸ್ಸಿನಿಂದ ಪರಮಾತ್ಮನನ್ನು ಸ್ಮರಿಸುತ್ತಿರಬೇಕು. ಹಾಗಿದ್ದರೆ ಮಾತ್ರವೇ ಆತನಿಗೆ ಜೀವನ್ಮುಕ್ತನಾಗಲು ಸಾಧ್ಯ. ಈ ರೀತಿಯಾಗಿ ತನ್ನನ್ನು ತಾನೇ ಸಮರ್ಪಿಸಿದರೆ ಆತನು ವೇದಮುಕ್ತಿಯ ಹಂತವನ್ನು ತಲುಪುವನು, ಎಂದರೆ ವಿಷ್ಣುಪಾದವನ್ನು ಸೇರುವನು. ಫಲಾಪೇಕ್ಷೆಯಿಲ್ಲದೆ ಕಾರ್ಯವನ್ನೆಸಗುವಾತನಿಗೆ ಮಾತ್ರ ಈ ಕಾರ್ಯ ಸಾಧ್ಯ.

ಈ ರೀತಿಯಾಗಿ ಶ್ರೀರಾಮಚಂದ್ರನು ಆಂಜನೇಯನನ್ನು ಮಧ್ಯವರ್ತಿಯನ್ನಾಗಿಸಿ ಲೋಕಕ್ಕೆ ಮುಕ್ತಿಮಾರ್ಗವನ್ನು ಬೋಧಿಸಿದನು.

ಆಂಜನೇಯನು ಅಷ್ಟೊಂದು ಉನ್ನತಸ್ಥಾನವನ್ನು ಪಡೆಯಲು ಮತ್ತು ಇಡೀ ಪ್ರಪಂಚವೇ ಆತನನ್ನು ಪೂಜಿಸುತ್ತಿರಲು ಕಾರಣವೇನಿರಬಹುದು? ಅವನ ಜೀವನವು ಸಂಪೂರ್ಣವಾಗಿ ಸ್ವಾಮಿಗೇ ಅರ್ಪಿತವಾಗಿತ್ತು. ಆತನ ಶಕ್ತಿ-ಸಾಮರ್ಥ್ಯಗಳು ಪರಮಾತ್ಮನ ಸೇವೆಗಾಗಿಯೇ ಸೀಮಿತವಾಗಿತ್ತು. ಅವನು ಇಡೀ ರಾಕ್ಷಸಕುಲಕ್ಕೇ ಭಯ ಹುಟ್ಟಿಸುವಂತಹ ಮಹಾವೀರನಾಗಿ ಮೆರೆದನು.

ವಾನರವಂಶದಲ್ಲಿ ಜನಿಸಿದ ಅಂಜನಾದೇವಿಯ ಮಗನೇ ಆಂಜನೇಯನು. ಅಂಜನಾದೇವಿಯ ಮಗನಾದುದರಿಂದಲೇ ಆತನಿಗೆ ಆಂಜನೇಯ ಎಂದು ಹೆಸರಾಯಿತು. ಅಂಜನಾದೇವಿಯು ಪೂರ್ವಜನ್ಮದಲ್ಲಿ ಪುಂಜಿಕಸ್ಥಲೆ ಎಂಬ ದೇವಕನ್ಯೆಯಾಗಿದ್ದಳು. ಆಕೆ ಸೌಂದರ್ಯರಾಣಿಯಾಗಿದ್ದಳಲ್ಲದೆ ಅತಿ ಚುರುಕುಮತಿಯವಳಾಗಿದ್ದಳು. ಋಷಿಯೊಬ್ಬನನ್ನು ನೋಡಿ ಕಿಸಿಕಿಸಿ ನಕ್ಕಿದ್ದರಿಂದ, ಅವಳ ಕುಚೇಷ್ಟೆಯನ್ನು ಕಂಡ ಮುನಿಯು ಮುನಿಸುಗೊಂಡು ಮಂಗನಾಗಿ ಜನಿಸುವಂತೆ ಶಾಪವನ್ನು ಕೊಟ್ಟನು. ಶಾಪಗ್ರಸ್ತಳಾಗಿ ಪರಿತಪಿಸುತ್ತಿದ್ದ ಆಕೆಯನ್ನು ನೋಡಿ ಮರುಕಗೊಂಡ ಋಷಿಯು ರೂಪದಲ್ಲಿ ವಾನರನಂತೆ ಇದ್ದರೂ ಮನಸ್ಸು-ಬುದ್ಧಿಗಳಲ್ಲಿ ಮಾನವನಂತಿರಲಿ ಎಂದು ಅನುಗ್ರಹಿಸಿದನು.

ಅಂಜನಾದೇವಿಯು ವಾನರ ವೀರನಾದ ಕೇಸರಿ ಎಂಬವನನ್ನು ವಿವಾಹವಾದಳು. ದಂಪತಿಗಳು ಅತೀ ಅನ್ಯೋನ್ಯವಾಗಿದ್ದರು. ಆದರೆ ಅವರಿಗೆ ಒಂದೇ ಒಂದು ಕೊರತೆಯೆಂದರೆ ಈ ತನಕ ಸಂತಾನೋತ್ಪತ್ತಿಯಾಗಲಿಲ್ಲ. ತಪೋಬಲದಿಂದ ಮಾತ್ರವೇ ಸುಪುತ್ರನನ್ನು ಪಡೆಯಲು ಸಾಧ್ಯ ಎಂದು ಮನಗಂಡಳು. ಶಿವನನ್ನು ಧ್ಯಾನಿಸಿ ಆತನನ್ನು ಮೆಚ್ಚಿಸಿದರೆ ತನ್ನ ಕಾರ್ಯವು ಸಾಫಲ್ಯವಾಗುವುದೆಂದು ಖಚಿತಗೊಂಡಳು.

ಹೀಗಿರಲು, ಅಂಜನಾಳು ಶಿವಧ್ಯಾನದಲ್ಲಿ ಲೀನಳಾಗಿದ್ದಾಗ ಶಿವನು ಪ್ರತ್ಯಕ್ಷನಾಗಿ, "ಶೀಘ್ರದಲ್ಲಿಯೇ ಸುಪುತ್ರನೊಬ್ಬನು ಜನಿಸುವನು" ಎಂದು ಹೇಳಿದನು. ಅಂಜನಾದೇವಿಗೆ ಶಿವನ ಮಾತನ್ನು ಕೇಳಿ ಅತ್ಯಂತ ಸಂತೋಷವಾಯಿತು. ಒಂದು ದಿನ ಆಕೆ ಧ್ಯಾನಕ್ಕೆ ಕುಳಿತಿದ್ದಾಗ ವಾಯುದೇವನು ಅವಳನ್ನು ನೋಡಿ ಅವಳ ಸೌಂದರ್ಯಕ್ಕೆ ಮಾರುಹೋಗಿ ಅವಳನ್ನು ಆಲಂಗಿಸಿಕೊಂಡನು. ತನ್ನ ತಪಸ್ಸಿಗೆ ಭಂಗತಂದಾತನಾರಾಗಿರಬಹುದೆಂದು ಆಕೆ ಸುತ್ತಲೂ ದಿಟ್ಟಿಸಿದಳು. ಕೂಡಲೇ ವಾಯುದೇವನು ಅವಳೆದುರು ಪ್ರತ್ಯಕ್ಷನಾಗಿ, "ದೇವಿ, ಕಳವಳಗೊಳ್ಳದಿರು, ನಾನು ವಾಯುದೇವನು; ರುದ್ರವೀರ್ಯವನ್ನು ನಿನಗೆ ತಲುಪಿಸಲೆಂದೇ ನಾನು ನಿನ್ನ ಒಳಗೆ ಬಂದಿರುವೆನು. ಪರಿಣಾಮವಾಗಿ ನೀನು ನನಗೆ ಸರಿಸಾಟಿಯಾದ ಮಗನನ್ನು ಪಡೆಯುವೆ'' ಎಂದನು.

ಅಂಜನಾದೇವಿಯು ಈಗ ಆನಂದಭರಿತಳಾದಳು. ಆಕೆಯು ಗರ್ಭವತಿಯಾಗಿ ನವಮಾಸ ತುಂಬಲು, ಎಂದರೆ, ಚೈತ್ರಮಾಸದ ಹುಣ್ಣಿಮೆಯ ದಿನ, ಮಂಗಳವಾರದಂದು ಪುತ್ರನೊಬ್ಬನಿಗೆ ಜನ್ಮವಿತ್ತಳು. ಆತನೇ ವಾಯುಪುತ್ರನೆಂದು ಪ್ರಸಿದ್ಧ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು.

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಒಡೆಯುವುದು | ರೂ – 0=50 |

ನಾದ ಆಂಜನೇಯನು. ಮೊಗ್ಗು ಅರಳುವ ಸಮಯದಲ್ಲಿ ಅದರ ಸುವಾಸನೆಯು ಎಲ್ಲೆಡೆ ಪಸರಿಸುವಂತೇ ವಾಯುಪುತ್ರನು ಜನಿಸಿದ ಕೂಡಲೇ ಎಲ್ಲಾ ಕಡೆಯಲ್ಲೂ ಚೈತನ್ಯ ಚಿಮ್ಮಿತು.

ಒಂದು ದಿನ ಅಂಜನಾದೇವಿ ಪುತ್ರನೊಬ್ಬನನ್ನೇ ಮನೆಯಲ್ಲಿ ಬಿಟ್ಟು ಹೂ–ಹಣ್ಣುಗಳನ್ನು ಕೊಯ್ದು ತರಲೆಂದು ಹೊರಗಡೆ ಹೋಗಿದ್ದಳು. ಸೂರ್ಯೋದಯವಾಗುವುದರಲ್ಲಿತ್ತು. ಸೂರ್ಯನು ಹೊಂಬಣ್ಣದ ಕಿರಣಗಳನ್ನು ಬೀರಿದ್ದನು. ಅದು ಹಣ್ಣು ಎಂದು ಭ್ರಮಿಸಿ ಆಂಜನೇಯನು ಸೂರ್ಯದೇವನ ಕಡೆಗೆ ಹಾರತೊಡಗಿದನು

ಅಂದು ಹುಣ್ಣಿಮೆಯು? ದಿನವಾಗಿತ್ತಲ್ಲದೆ ಸೂರ್ಯನಿಗೆ ಗ್ರಹಣ ಹಿಡಿಯುವುದರಲ್ಲಿತ್ತು. "ರಾಹು" ಎಂದಿನಂತೆ ತನ್ನ ಕರ್ತವ್ಯವನ್ನು ಮಾಡಲೋಸುಗ ಸೂರ್ಯನಿಗಭಿಮುಖವಾಗಿ ಬರುತ್ತಿದ್ದನು. ತನಗೆ ಪ್ರತಿಸ್ಪರ್ಧಿಯಂತೆ ಬರುತ್ತಿದ್ದ ರಾಹುವನ್ನು ಕಂಡ ಆಂಜನೇಯನು ಸಿಟ್ಟುಗೊಂಡು ತನ್ನ ಬಾಲದಿಂದ ರಾಹುವನ್ನು ಎತ್ತಿ ಬೀಸಿದನು. ರಾಹು ಕೂಡಲೇ ತನ್ನ ದುಃಸ್ಥಿತಿಯನ್ನು ಇಂದ್ರನಲ್ಲಿ ತೋಡಿಕೊಂಡನು. ತಕ್ಷಣವೇ ಇಂದ್ರನು ತನ್ನ ಐರಾವತವನ್ನೇರಿ ಬಂದನು. ಆಂಜನೇಯನನ್ನು ಕಂಡವನೇ ಇಂದ್ರನು ತನ್ನ ವಜ್ರಾಯುಧದಿಂದ ಆತನನ್ನು ಹೊಡೆದನು. ಆ ಹೊಡೆತವು ಆಂಜನೇಯನ ಕೆನ್ನೆಗೆ ತಾಗಿ ಕೆನ್ನೆಯ ಎಲುಬು ಮುರಿದು ಹೋಯಿತು. ನೋವನ್ನು ತಾಳಲಾರದೆ ಆಂಜನೇಯನು ಮೂರ್ಛೆತಪ್ಪಿ ಕೆಳಗೆ ಬಿದ್ದುಬಿಟ್ಟನು.

ವಾಯುದೇವನು ತನ್ನ ಸುಪುತ್ರನಿಗಾದ ದುರವಸ್ಥೆಯನ್ನು ಕಂಡು ರೋಷಾವೇಶಗೊಂಡನು. ತನ್ನ ಕರ್ತವ್ಯವನ್ನು ಮಾಡಲಾರೆನೆಂದು ಚಲನೆಯಿಲ್ಲದೆ ನಿಂತುಬಿಟ್ಟನು. 'ನಿನಗೂ ಈ ಗತಿ ಬಂತೇ' ಎಂದು ಹೇಳಿ ದುಃಖತಪ್ತನಾಗಿ ಮಗನ ಬಳಿಯಲ್ಲಿಯೇ ಇದ್ದುಬಿಟ್ಟನು.

ವಾಯುದೇವನ ಈ ಅಚಲಾವಸ್ಥೆಯನ್ನು ಕಂಡ ಪ್ರಪಂಚದ ಜೀವಿಗಳೆಲ್ಲ ತಲ್ಲಣಗೊಂಡವು. ಎಲ್ಲರೂ ಬ್ರಹ್ಮದೇವನ ಬಳಿಹೋಗಿ ಮೊರೆಯಿಟ್ಟರು. ಕೂಡಲೇ ಬ್ರಹ್ಮ–ವಿಷ್ಣು–ಮಹೇಶ್ವರರು ವಾಯುದೇವನ ಬಳಿಗೆ ಬಂದು ಶಾಂತನಾಗುವಂತೆ ಬೇಡಿಕೊಂಡರು. ವಿಷ್ಣುವು ಆಂಜನೇಯನನ್ನು ಸ್ಪರ್ಶಿಸಿದ ಕೂಡಲೇ ಆತನು ಚೇತರಿಸಿದನು. "ತನ್ನ ಪುತ್ರನು ಅಮರತ್ವವನ್ನು ಹೊಂದಬೇಕು ಮತ್ತು ಆತನು ಅಜೇಯನಾಗುವಂತೆ ವರವನ್ನು ಕೊಟ್ಟರೆ ಮಾತ್ರ ತನ್ನ ಕಾರ್ಯ ನಿರ್ವಹಿಸುವೆನು" ಎಂದು

ತನ್ನ ನಿರ್ಧಾರವನ್ನು ತಿಳಿಸಿದನು. ಕೂಡಲೇ ವಿಷ್ಣುವು, "ಯಾರೂ ಆತನನ್ನು ಸೋಲಿಸಲಾರರು" ಎಂದು ವರವಿತ್ತನು. ಶಿವನು, "ಯಾರಿಗೂ ಆತ ಭಯಪಡಲಾರನು, ಅಲ್ಲದೆ ತನ್ನ ತ್ರಿಶೂಲವೂ ಆತನಿಗೆ ಪರಿಣಾಮಕಾರಿಯಾಗದು" ಎಂದು ಆಶೀರ್ವದಿಸಿದನು ಬ್ರಹ್ಮನು "ಬ್ರಹ್ಮಾಸ್ತ್ರ ಸಮೇತವಾಗಿ ಯಾವ ಅಸ್ತ್ರವೂ ಆತನಿಗೆ ಹಾನಿಮಾಡದು" ಎಂದನು. ಇಂದ್ರನು, "ಆಂಜನೇಯನು 'ಹನುಮಂತ' ಎಂದೇ ಪ್ರಖ್ಯಾತನಾಗುವನು, ಏಕೆಂದರೆ ವಜ್ರಾಯುಧದಿಂದ ಆತನ "ಹನು"ವಿಗೆ ಎಂದರೆ ಕೆನ್ನೆಗೆ ಪೆಟ್ಟು ತಗಲಿದುದರಿಂದಲೂ ಆತನ ಶರೀರವು ಅಜೇಯತ್ವವನ್ನು ಹೊಂದಿರುವುದು ಎಂದರೆ ಆತನ ಶರೀರವು ವಜ್ರದಂತೆ ಗಟ್ಟಿಯಾಗಿರುವುದರಿಂದಲೂ ಆತನಿಗೆ ಅನ್ವರ್ಥವೆನಿಸುವುದು ಅಲ್ಲದೆ ಆತನು ಇಚ್ಛಾ–ಮರಣಿ, ಎಂದರೆ ಆತನಿಗೆ ಇಚ್ಛೆಯಿದ್ದರೆ ಮಾತ್ರ ಮರಣ ಸಂಭವಿಸಬಹುದಷ್ಟೆ" ಎಂದು ವರ ನೀಡಿದನು. ಈ ರೀತಿಯಾಗಿ ಇತರ ಶಕ್ತಿದೇವತೆಗಳೂ ಆತನಿಗೆ ತರತರದ ವರವಿತ್ತು ಹಿಂದಿರುಗಿದನು.

ಹನುಮಂತನು ಈಗ ಅತ್ಯಂತ ಪ್ರಬಲವ್ಯಕ್ತಿಯಾಗಿಬಿಟ್ಟನು. ಸ್ವಲ್ಪವೇ ಸಮಯದಲ್ಲಿ ಆತನು ವೇದಶಾಸ್ತ್ರಾದಿ ವಿದ್ಯೆಗಳನ್ನು ಸೂರ್ಯದೇವನಿಂದ ಕಲಿತುಬಿಟ್ಟನು. ಸಂಗೀತದಲ್ಲಿಯೂ ಆತನು ಪ್ರವೀಣನೆನಿಸಿದನು. ಆದರೆ ಎಲ್ಲಾ ವಿದ್ಯೆಗಳಲ್ಲಿ ಪರಿಣತನಾದರೂ, ತನ್ನ ಹುಟ್ಟುಗುಣ ಘಟ್ಟ ಹತ್ತಿದರೂ ಬಿಡದೆನುವಂತೆ ಕುಚೇಷ್ಟೆ ಮಾಡುವುದನ್ನು ಬಿಡುತ್ತಿರಲಿಲ್ಲ. ಹನುಮಂತನು ವಾನರ ಕೂಟಕ್ಕೇ ಪ್ರಮುಖನೆನಿಸಿದನು. ಕಿಷ್ಕಿಂಧೆಯಲ್ಲಿ ಸುಗ್ರೀವನೆಂಬ ವಾನರರಾಜನು ಆತನನ್ನು ತನ್ನ ಮುಖ್ಯಮಂತ್ರಿಯಾಗಿ ನೇಮಿಸಿದನು. ಆತನ ಮುಂದಾಳುತ್ವದಲ್ಲಿ ಚಾಣಕ್ಯನಂತೆ ವರ್ತಿಸಿದನು.

ತಮ್ಮನಾದ ಸುಗ್ರೀವನನ್ನು ಅಣ್ಣ ವಾಲಿಯು, ಕೊಲ್ಲುವೆನೆಂದು ಅಟ್ಟಿಸಿಕೊಂಡು ಬರುತ್ತಿದ್ದಾಗ ಹನುಮಂತನ ಆದೇಶದಂತೆ ಅವರು ಋಷ್ಯಮೂಕವೆಂಬ ಪರ್ವತದಲ್ಲಿ ತಲೆ ಮರೆಸಿಕೊಂಡರು. ಹಿಂದೊಮ್ಮೆ ವಾಲಿಯು ಶಾಪಗ್ರಸ್ತನಾಗಿದ್ದುದರಿಂದ ಆತನು ಆ ಪರ್ವತಕ್ಕೆ ಹೋಗುವಂತಿರಲಿಲ್ಲ. ಹನುಮಂತನೂ ಸುಗ್ರೀವನೂ ಋಷ್ಯಮೂಕ ಪರ್ವತದಲ್ಲಿದ್ದಾಗ ಶ್ರೀರಾಮನು ತಮ್ಮನಾದ ಲಕ್ಷ್ಮಣನೊಂದಿಗೆ ಸೀತಾದೇವಿಯನ್ನು ಅರಸುತ್ತಾ ಬಂದನು. ಅವರನ್ನು ಕಂಡಾಗ ಸುಗ್ರೀವನಿಗೆ ಅತ್ಯಂತ ಭಯವಾಯಿತು. ಅವರು ವಾಲಿಯ ಕಡೆಯವರಾಗಿರಬೇಕೆಂದು ಶಂಕೆಯುಂಟಾಯಿತು. ಆದರೆ ಹನುಮಂತನು ಆತನ ಹೆದರಿಕೆಯನ್ನು ಹೋಗಲಾಡಿಸಿದನು.

ಹನುಮಂತನು ಬ್ರಾಹ್ಮಣನ ವೇಷವನ್ನು ಧರಿಸಿ ಶ್ರೀರಾಮನೆಡೆಗೆ ಬಂದು ನಿಂತನು. ಆತನನ್ನು ಕಂಡಾಗ ಶ್ರೀರಾಮಲಕ್ಷ್ಮಣರಿಗೆ ಪ್ರೇಮ ಉಕ್ಕಿಬಂತು. ಹನುಮಂತನ ಮಾತಿನ ವೈಖರಿಯನ್ನು ಕಂಡಾಗ ತಮ್ಮ ಕಾರ್ಯವು ಜಯಪ್ರದವಾಗಲು ಇಂತಹ ಮಹಾಮಹಿಮರೇ ಕಾರಣವಾಗಬಲ್ಲರು ಎಂಬ ಭಾವನೆಯುಂಟಾಯಿತು.

ಸೀತಾನ್ವೇಷಣೆಯ ಸಂದರ್ಭದಲ್ಲಿ ಹನುಮಂತನು ತನ್ನ ಬುದ್ಧಿ ಕೌಶಲ್ಯವನ್ನು ಪ್ರಯೋಗಿಸಿ ಮಹಾಮೇಧಾವಿಯೆನಿಸಿದನು. ಲಂಕಾಪಟ್ಟಣದ ಅಶೋಕವನದಲ್ಲಿ ಕುಳಿತಿದ್ದ ಸೀತಾದೇವಿಗೆ ಹನುಮಂತನನ್ನು ಕಂಡಾಗ ಅಭಿಮಾನ ಉಂಟಾಗಿ ಆತನೊಡನೆ ತನ್ನೆಲ್ಲ ಗೋಪ್ಯ ವಿಷಯಗಳನ್ನೂ ಪ್ರಸ್ತಾಪಿಸಿದ್ದಳು. ಹನುಮಂತನೂ ಅಷ್ಟೆ. ಸೀತಾರಾಮರನ್ನು ಅತಿಯಾಗಿ ಮೆಚ್ಚಿಕೊಂಡಿದ್ದನು. ಅಲ್ಲದೆ ಅವರನ್ನು ಅತ್ಯಂತ ಶ್ರದ್ಧಾಭಕ್ತಿಗಳಿಂದ ಪೂಜಿಸುತ್ತಿದ್ದನು. ಶ್ರೀರಾಮನ ಮಹಾಭಕ್ತನಾದುದರಿಂದಲೇ ಆತನನ್ನು ರಾಮದೂತನೆಂದೇ ಎಲ್ಲ ಭಕ್ತರಿಂದಲೂ ಕರೆಯಲ್ಪಟ್ಟನು. ಎಂದರೆ ಭಕ್ತಮಹಾಶಯರು ಆತನನ್ನು ಈ ರೀತಿಯಲ್ಲಿ ಸ್ಮರಿಸುತ್ತಿರುವರು—

ಮನೋಜವಂ ಮಾರುತತುಲ್ಯ ವೇಗಂ।
ಜಿತೇಂದ್ರಿಯಂ ಬುದ್ಧಿ ಮತಾಂ ವರಿಷ್ಠಂ॥
ವಾತಾತ್ಮಜಂ ವಾನರಯೂಥ ಮುಖ್ಯಂ।
ಶ್ರೀರಾಮ ದೂತಂ ಶಿರಸಾ ನಮಾಮಿ॥

ಯಾವುದೇ ಸಾಹಸಕಾರ್ಯವನ್ನೆಸಗುವಾಗ ಶ್ರೀರಾಮನು ಹನುಮಂತನನ್ನೇ ಮುಂದಾಳನ್ನಾಗಿ ಮಾಡುವನು. ಅರಣ್ಯವಾಸದ ಅವಧಿಮುಗಿದು ಇನ್ನು ಅಯೋಧ್ಯೆಗೆ ಹಿಂದಿರುಗುವುದೆಂಬ ಸಂದೇಶವನ್ನು ಭರತನಿಗೆ ತಿಳಿಸಲು ಶ್ರೀರಾಮನು ಹನುಮಂತನನ್ನೇ ನೇಮಿಸಿರುವನು. ಹನುಮಂತನು ತನಗೊಪ್ಪಿಸಿದ ಕಾರ್ಯವನ್ನು ಅತ್ಯಂತ ನಿಷ್ಠೆಯಿಂದ ಪೂರೈಸಿರುವನು.

ಶಕ್ತಿಯಲ್ಲಿ, ಸಾಮರ್ಥ್ಯದಲ್ಲಿ, ತಿಳಿವಳಿಕೆಯಲ್ಲಿ ಹನುಮಂತನಿಗೆ ಸರಿಸಾಟಿಯಾದವರು ಇನ್ನೊಬ್ಬರಿಲ್ಲ. ರಾವಣನಿಗೆದುರಾಗಿ ಯುದ್ಧ ಮಾಡುವ ಸಂದರ್ಭದಲ್ಲಿಯೂ ಶ್ರೀರಾಮನಿಗೆ ಸಕಲವಿಧದಲ್ಲಿಯೂ ತನ್ನ ಕೈಚಳಕವನ್ನು ತೋರಿಸಿರುವನು. ಮಹಾಬಲಶಾಲಿಗಳೆನಿಸಿದ ಹಲವಂದಿ ರಾಕ್ಷಸರನ್ನು ಸದೆಬಡಿದಿರುವನು. ರಾವಣನು ತನ್ನ ವೀರಪುತ್ರನಾದ ಅಕ್ಷಕುಮಾರನನ್ನು ಯುದ್ಧ ಮಾಡಲು ಕಳಿಸಿಕೊಟ್ಟಾಗ ತಕ್ಷಣವೇ ಹನುಮಂತನು ಆತನನ್ನು ಕೊಂದುಹಾಕಿದ್ದನು. ಪ್ರಹಸ್ತನ ಮಗನಾದ ಜಂಬುಮಾಲಿಯನ್ನೂ ಇತರ ಏಳುಮಂದಿ ಮಂತ್ರಿಪುತ್ರರನ್ನೂ ಆತನು ಕೊಂದಿರುವನು. ಇಂದ್ರಜಿತುವೂ ಹನುಮಂತನನ್ನು ಗೆಲ್ಲಲಾರದಾದನು. ಕೊನೆಗೆ ಆತ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಬೇಕಾಯಿತು.

ಸೀತಾನ್ವೇಷಣೆಯ ಸಂದರ್ಭದಲ್ಲಿ ಲಂಕೆಗೆ ಹೋಗಿದ್ದಾಗ ಅಲ್ಲಿ ಸೀತಾಮಾತೆಗೆ ತನ್ನ ಶಕ್ತಿಯನ್ನು ತೋರಿಸಲೆಂದು ಮತ್ತು ರಾವಣನ ಬಲವನ್ನು ಪರೀಕ್ಷಿಸಲೆಂದು ಸೀತೆಯಿದ್ದ ಅಶೋಕವನವನ್ನೇ ಸುಟ್ಟು ಬೂದಿ ಮಾಡಿರುವನು. ಹನುಮಂತನ ಹೆಸರು ಕೇಳುವಾಗ ಇಡೀ ಲಂಕೆಯೇ ನಡುಗುತ್ತಲಿತ್ತು. ಯುದ್ಧದ ಕೊನೆಯ ಘಟ್ಟದಲ್ಲೂ ಹನುಮಂತನೇ ಮುಂದಾಳಾಗಿದ್ದನು. ಪರ್ವತರಾಜನ ರೂಪವನ್ನು ತಾಳಿ ಎಲ್ಲ ಯೋಧರನ್ನೂ ಹಿಮ್ಮೆಟ್ಟಿದನು. ಇಂದ್ರಜಿತುವು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಎಲ್ಲರನ್ನೂ ಮೂರ್ಛಿತರನ್ನಾಗಿಸಿದಾಗ ಹನುಮಂತ ಮತ್ತು ವಿಭೀಷಣರು ಎಚ್ಚರದಲ್ಲಿರುವವರು ಯಾರಿರುವರೆಂದು ಯುದ್ಧಭೂಮಿಯಲ್ಲಿ ಅತ್ತಿತ್ತ ಹುಡುಕಾಡುತ್ತಿದ್ದರು. ಜಾಂಬವಂತನ ಬಳಿ ಬಂದಾಗ ಆತ, "ಹನುಮಂತನು ಎಚ್ಚರದಲ್ಲಿರುವನೋ" ಎಂದು ಉದ್ಗರಿಸುತ್ತಿದ್ದುದು ಕೇಳಿಸಿತು. ಜಾಂಬವಂತನ ಈ ಮಾತನ್ನು ಕೇಳಿದಾಗ "ಅಷ್ಟೊಂದು ಮಹಾಬಲಶಾಲಿಗಳಿರುವಲ್ಲಿ ಈತ ಹನುಮಂತನನ್ನು ಮಾತ್ರ ವಿಚಾರಿಸಲು ಕಾರಣವೇನಿರಬಹುದು. ಅಲ್ಲದೆ "ಶ್ರೀರಾಮಲಕ್ಷ್ಮಣರು ಇರುವರಷ್ಟೇ!" ಎಂದು ಆಶ್ಚರ್ಯಗೊಂಡು ಕೇಳಿದನು. ಆಗ ಜಾಂಬವನು, "ಮಹಾವೀರ ಹನುಮನಿದ್ದನೆಂದಾದರೆ ನಮ್ಮ ವಾನರಸೇನೆಗೆ ಹಾನಿಯುಂಟಾಗದು. ಆದರೆ ಹನುಮಂತನೇ ಇಲ್ಲವೆಂದಾದಲ್ಲಿ ನಾವೆಲ್ಲರೂ ಸತ್ತಂತೆಯೇ" ಎಂದು ಹನುಮಂತನನ್ನು ಕೊಂಡಾಡಿದನು.

ತನ್ನ ಪರಿವಾರದವರನ್ನು ರಕ್ಷಿಸಲೋಸುಗ ಮೃತ ಸಂಜೀವಿನಿಯೆಂಬ ಔಷದಿಯನ್ನು ತರಲು ಹಿಮಾಲಯ ಪರ್ವತದಲ್ಲಿ ಹುಡುಕಾಡಿ ಅದು ಸಿಗದಿದ್ದಾಗ, ಆ ಪರ್ವತ ಭಾಗವನ್ನೇ ಕಿತ್ತು ತಂದ ಮಹಾ ಬಲಶಾಲಿ ಆ ಹನುಮಂತನು. ಹನುಮಂತನು ಎದುರಿಸಿಕೊಂಡ ರಾಕ್ಷಸರಲ್ಲಿ ಅಕಂಪನ, ದೇವಾಂತಕ, ನರಾಂತಕ, ತ್ರಿಶಿರ ಮತ್ತು ನಿಕುಂಭರೇ ಪ್ರಮುಖರು.

ಶ್ರೀರಾಮಪಟ್ಟಾಭಿಷೇಕದ ಸಂದರ್ಭದಲ್ಲಿಯೂ ದೇವಮಾತೆಯಾದ ಸೀತೆಯು ಹನುಮಂತನಿಗೆ

ಅತ್ಯಂತ ಗೌರವಸ್ಥಾನವನ್ನು ಕೊಟ್ಟಿರುವಳು. "ಧೈರ್ಯದಲ್ಲಿ, ಸ್ಥೈರ್ಯದಲ್ಲಿ, ಶಕ್ತಿಸಾಮರ್ಥ್ಯದಲ್ಲಿ ಯಾವಾತನು ಅತಿ ಮಿಗಿಲೆನಿಸುವನೋ ಆತನಿಗೆ ಈ ಮುತ್ತಿನ ಹಾರವನ್ನು ಕೊಡು" ಎಂದು ಶ್ರೀರಾಮನು ತನ್ನ ಧರ್ಮಪತ್ನಿಯಾದ ಸೀತಾದೇವಿಯ ಕೈಯಲ್ಲಿ ಮುತ್ತಿನಹಾರ ವೊಂದನ್ನು ಕೊಟ್ಟಿದ್ದನು. ಸೀತೆಯು ಆ ಹಾರವನ್ನು ಯಾವ ಯೋಚನೆಯೂ ಮಾಡದೆ ಹನುಮಂತನಿಗೇ ಇತ್ತಿದ್ದಳು.

ಮುತ್ತಿನಹಾರ ಕೈಗೆ ಸಿಕ್ಕಿದ ಕೂಡಲೇ ಹನುಮಂತನು ಒಂದೊಂದೇ ಮುತ್ತನ್ನು ತುಂಡುಮಾಡಿ ಒಳಗೇನಿದೆಯೆಂದು ನೋಡುತ್ತಿದ್ದನು. ಇದನ್ನು ಕಂಡ ವಿಭೀಷಣನು "ಹೀಗೇಕೆ ಮಾಡುತ್ತಿರುವೆ?" ಎಂದು ಪ್ರಶ್ನಿಸಿದನು. ಆಗ ಹನುಮಂತನು "ಮುತ್ತಿನ ಒಳಗಡೆ ಶ್ರೀರಾಮನಾಮವಿರುವುದೋ ಎಂದು ನೋಡುತ್ತಿರುವೆ, ಶ್ರೀರಾಮನಾಮವಿರದ ಮುತ್ತು ತನಗೆ ಧರಿಸಿಕೊಳ್ಳಲು ಅನುಚಿತ" ಎಂದು ವಿವರಿಸಿದನು. ಶ್ರೀರಾಮಭಕ್ತನ ಈ ಮಾತನ್ನು ಕೇಳಿದಾಗ ವಿಭೀಷಣನಿಗೆ ನಗು ಬಂತು. ನನ್ನ ಹೃದಯದೊಳಗೇ ಪರಮಾತ್ಮನ ಇರವು ಇದೆಯೆಂದು ಎದೆಯನ್ನು ಕೈಗಳಲ್ಲಿ ಹರಿದು ತೋರಿಸಿದನು. ನಿಜವಾಗಿಯೂ ಎದೆಯೊಳಗೆ ಸೀತಾರಾಮಲಕ್ಷ್ಮಣರು ಕಂಡರು. ಎಲ್ಲರೂ ಹರ್ಷೋದ್ಗಾರವೆತ್ತಿದರು. ಪ್ರತಿಯೊಬ್ಬರೂ ಹನುಮಂತನನ್ನು ಕೊಂಡಾಡುವವರೇ. ಆದ್ದರಿಂದಲೇ ಹನುಮಂತನು ಎಲ್ಲರಿಂದಲೂ ಪೂಜಿಸಲ್ಪಡುವನು.

ಬುದ್ಧಿರ್ಬಲಂ ಯಶೋಧೈರ್ಯಂ
ನಿರ್ಭಯತ್ವಂ ಅರೋಗತಾ।
ಅಜಾಡ್ಯಂ ವಾಕ್ಪಟುತ್ವಂ ಚ
ಹನುಮತ್ ಸ್ಮರಣಾದ್ಭವೇತ್ ॥



# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿವೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**

**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**

**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**

**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**

**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (12 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ 6-00, ಬೆಳಗ್ಗೆ 10-00, ಸಂಜೆ 3-00

ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 18 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

# ಭೀಷ್ಮ - ಹನುಮಂತ

ಭಾರತೀಯ ಸಂಸ್ಕೃತಿಯನ್ನು ಪ್ರತಿನಿಧಿಸುವ, ಪ್ರತಿಬಿಂಬಿಸುವ, ಮಹೋನ್ನತ ಜಗದ್ಭವ್ಯ ಕಾವ್ಯಗಳಲ್ಲಿ ಲೋಕ ಪೂಜ್ಯವ್ಯಕ್ತಿಗಳುಂಟು, ಆದರಣೀಯ ವ್ಯಕ್ತಿಗಳುಂಟು, ಅನುಕರಣೀಯ ವ್ಯಕ್ತಿಗಳುಂಟು, ಅನನುಕರಣೀಯ ಪಾತ್ರಗಳುಂಟು.ಶಾಂತಿದಾಯಕ ಸಂದರ್ಭಗಳುಂಟು. ಅಶಾಂತಿ ಕಾರಕ ಸನ್ನಿವೇಶಗಳುಂಟು. ಅಮೃತವೂ ಇದೆ, ಹಾಲಾಹಲವೂ ಇದೆ. ಜನ, ತಮ್ಮ ವಿವೇಚನಾ ಶಕ್ತಿಗನುಗುಣವಾಗಿ, ಅಥವ ಸಂಸ್ಕಾರಕ್ಕನುಗುಣವಾಗಿ. ಮಹಾಕಾವ್ಯದ ಪಾತ್ರಗಳನ್ನು ಮೆಚ್ಚುತ್ತಾರೆ ಎಂಬ ಆರ್ಯೋಕ್ತಿಯು ಅರ್ಥರಹಿತವಾದುದೇನಲ್ಲ.

ವ್ಯಾಸವಾಲ್ಮೀಕಿಗಳು ತಂತಮ್ಮ ಕಾವ್ಯಗಳಲ್ಲಿ ಕಡೆದು ನಿಲ್ಲಿಸಿರುವ ಪಾತ್ರಗಳು, ತಮ್ಮ ವೈಭವದಿಂದ, ಪಾವಿತ್ರ್ಯದಿಂದ, ಇಂದಿಗೂ, ಎಂದೆಂದಿಗೂ ಅಚ್ಚಳಿಯದೆ ಬದುಕಿರುತ್ತವೆ. ಜೀವನದ ಮೌಲ್ಯಗಳನ್ನರ್ಥ ಮಾಡಿಕೊಂಡ ಸತ್ಪುರುಷರ ಪರಂಪರೆಯಲ್ಲಿ ಬಾಳಿಬದುಕಿದ ನಮ್ಮವರು, ಆ ಕಾವ್ಯಗಳ ಪಾತ್ರಗಳನ್ನು ಕೇವಲ ಕಾಲ್ಪನಿಕ ಪಾತ್ರಗಳೆಂಬ ದೃಷ್ಟಿಯಿಂದ ನೋಡುವುದಿಲ್ಲ. ಅವರು ಜೀವಂತ ವ್ಯಕ್ತಿಗಳು, ಸತ್ ಪ್ರೇರಣೆಯ ಚಿಲುಮೆಗಳು, ರೂಪು ಪಡೆದ ಮೌಲ್ಯಗಳು ಎಂಬಂತೆ ಗೌರವಿಸುತ್ತಾರೆ–ಪೂಜಿಸುತ್ತಾರೆ.

ರಾಮಾಯಣ, ಮಹಾಭಾರತಗಳು ಕೇವಲ ಕಾವ್ಯಗಳಲ್ಲ – ಒಂದು ಸಂದೇಶ, ಒಂದು ತತ್ತ್ವ, ಒಂದು ಸಿದ್ಧಾಂತ. ಅವುಗಳಲ್ಲಿರುವ ಕಥಾವಸ್ತುವಾದರೂ ಏನು? ಒಂದು ಮನೆಯ ಕಥೆ–ಒಂದು ಮನದ ವ್ಯಥೆ! ಅಲ್ಲಿ ಒಬ್ಬೊಬ್ಬರ ವ್ಯಥೆ ಒಂದೊಂದು ರೀತಿಯಲ್ಲಿದೆ. ಈ ಗ್ರಂಥಗಳಲ್ಲಿ ಪ್ರಸ್ತಾಪಮಾಡದೆ ಇರುವ ವಿಚಾರ, ಬಹುಶಃ ಬ್ರಹ್ಮ ಸೃಷ್ಟಿಯಲ್ಲೇ ಇಲ್ಲವೆಂದು ಕಾಣುತ್ತದೆ.

ಹನುಮಂತನಿಲ್ಲದೆ ರಾಮಾಯಣವಿಲ್ಲ–ಭೀಷ್ಮನಿಲ್ಲದೆ ಮಹಾಭಾರತವಿಲ್ಲ. ಇವರಿಬ್ಬರಲ್ಲಿ ತುಂಬ ಸಾಮ್ಯವಿದೆ, ಪರಿಪಕ್ವ ಅನುಭವವಿದೆ; ಕರ್ಮ ನಿಷ್ಠೆ ಇದೆ; ಚಾರಿತ್ರ್ಯಶುದ್ಧಿ ಇದೆ; ಹೈಮಾಚಲ ಸದೃಶ ಔನ್ನತ್ಯವಿದೆ. ಆದರೆ ಬಾಳಿನಲ್ಲಿ ಅವರು ಎದುರಿಸಬೇಕಾದ ಸನ್ನಿವೇಶಗಳಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿದೆ. ಅವರು ಬಾಳಿದ ರೀತಿಯೇ ಅವರ ಅಜರಾಮರ ಕೀರ್ತಿಗೆ ಕಾರಣ.

ಇಬ್ಬರೂ ಹಿರಿಯತತ್ತ್ವ ಒಂದಕ್ಕೆ ಶರಣಾದವರು, ಅಪ್ರತಿಹತ ಪೌರುಷ ಸಂಪನ್ನರು–ಅನುಪಮ ಶೀಲ ಸಂಪನ್ನರು. ಇಬ್ಬರೂ ಸ್ವಾಮಿ ನಿಷ್ಠರು, ಕಾರ್ಯದಕ್ಷರು, ಗಂಭೀರ ಚಿನ್ತನ ಶೀಲವ್ಯಕ್ತಿಗಳು, ಮಹಾಯೋಗಿಗಳು, ನಿರ್ಲಿಪ್ತರು; ಇಚ್ಛಾಮರಣದ ವರಪಡೆದವರು; ಸ್ಥಿತ ಪ್ರಜ್ಞರು; ಕುಶಾಗ್ರಮತಿಗಳು, ಬಹುಶ್ರುತರು ಪರಿಶುದ್ಧ ಚೇತನಗಳು, ಇಬ್ಬರೂ ಧರ್ಮೈಕ ಪಕ್ಷಪಾತಿಗಳು, ಜ್ಞಾನಿಗಳು–ಭಕ್ತರು, ಪ್ರಾಜ್ಞರು–ಪೂಜ್ಯರು ಪರೇಂಗಿತಜ್ಞರು, ವೇದಾಂತಿಗಳು, ತ್ಯಾಗಜೀವಿಗಳು; ರಾಜ್ಯ ಸಾಮ್ರಾಜ್ಯಗಳ ಹಣೆಬರಹವನ್ನೇ ಬದಲಿಸಬಲ್ಲ ಮೇಧಾವಿಗಳು; ಜೀವನವನ್ನು ವ್ರತವಾಗಿ ಸ್ವೀಕರಿಸಿದ ನಿಷ್ಠಾವಂತರು.

ಹನುಮಂತನನ್ನು ರಾಮಾಯಣ ಮಹಾಮಾಲಾರತ್ನವೆಂದು ಕರೆದರೆ, ಭೀಷ್ಮನನ್ನು ಕುರುಕುಲ ಪಿತಾಮಹನೆಂದು ಕರೆದರು. ಎರಡೂ ಗೌರವಾನ್ವಿತ ಪದ ಪುಂಜಗಳೆ. ಸುಗ್ರೀವ ಸಚಿವ, ರಾಮದೂತ, ಸೀತಾಶೋಕ ವಿನಾಶಕ, ಸಂಭಾಷಣ ಚತುರ, ವಿನಮ್ರ ವ್ಯಕ್ತಿ, ಸಂದರ್ಭೋಚಿತ ಹಿತೋಪದೇಶಕ, ಅನನ್ಯಸಾಧಾರಣ ಕಾರ್ಯದಕ್ಷ...... ಹೀಗೆ ಆಂಜನೇಯನ ವ್ಯಕ್ತಿತ್ತ್ವ ಬಹುಮುಖವಾಗಿದೆ.

ಕುರುವಂಶ ಸಂರಕ್ಷಕ, ಕುರುವಂಶ ಹಿತೈಷಿ, ಪಾಂಡವ ಪಕ್ಷಪಾತಿ, ಭವಿಷ್ಯದ್ದರ್ಶಿ, ಅತ್ಯುನ್ನತ ಸಲಹೆಗಾರ, ವಚನ ಬದ್ಧ, ಸಮರ ತಂತ್ರ ವಿಶಾರದ, ವಿವೇಕ ಪೂರ್ಣ ಸೌಜನ್ಯ–ಹೀಗೆ ಭೀಷ್ಮನ ವ್ಯಕ್ತಿತ್ತ್ವ ಬಹುಮುಖವಾಗಿದೆ. ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ –ಎಂಬ ಆದಿಕವಿ! ಸೂಕ್ತಿಯಂತೆ, ಭೀಷ್ಮನಿಗೆ ಭೀಷ್ಮನೇ, ಹನುಮಂತನಿಗೆ ಹನುಮಂತನೇ ಸರಿಸಾಟಿ. ಅವರೊಡನೆ ಹೋಲಿಕೆಗೆ ಇನ್ನೊಬ್ಬವ್ಯಕ್ತಿ ಇಲ್ಲ. ಈ ಮಹಾಪುರುಷರ ಜೀವನದ ಕೆಲವು ಸಂದರ್ಭಗಳನ್ನು ಕುರಿತು ಆಲೋಚಿಸುವುದು ಅಪ್ರಾಸಂಗಿಕವಾಗಲಾರದೆಂದು ಹೇಳಲಾಗುತ್ತಿದೆ.

ವಿದ್ವಾನ್ ಬ. ನ. ಗುಂಡೂರಾವ್

ಲೋಕ ಭೀಕರ ಕುರುಕ್ಷೇತ್ರದಲ್ಲಿ, ಸಮರ ಸರ್ವಜ್ಞ ಭೀಷ್ಮ, ಕೌರವಸೈನ್ಯದ ಯಜಮಾನ್ಯ ವಹಿಸಿಕೊಂಡು, ಪ್ರಾರಂಭದ ಹತ್ತುದಿನ ಯುದ್ಧನಡೆಸಿದ್ದಾನೆ. ಆತನೆದುರಿಗೆ ತಲೆ ಎತ್ತುವುದು ಪಾಂಡವರಿಗೆ ಕಷ್ಟವಾಗಿದೆ. ಅವರ ಬಹುಭಾಗ ಸೈನ್ಯಹತವಾಗಿದೆ. ಆಚಾರ್ಯ ಭೀಷ್ಮನ ಅಸ್ತ್ರ ಶಸ್ತ್ರಗಳ ಹೊಡೆತಕ್ಕೆ ಪಾರ್ಥನೇ ತಲ್ಲಣಿಸಿದ್ದಾನೆ. ಕುರುಕುಲ ಪಿತಾಮಹನ ಪೌರುಷಾಗ್ನಿಯಲ್ಲಿ ಪಾಂಡವ ಪತಂಗಗಳು ಸುಟ್ಟುಹೋಯುವುದು ದಿಟವೆಂದು ಕೃಷ್ಣನಿಗೂ ಭಾಸವಾಗಿದೆ. ಆಗ ಕೃಷ್ಣ, ತಾನು ಮಾಡಿದ್ದ ಪ್ರತಿಜ್ಞೆಯನ್ನೂ ಬದಿಗಿಟ್ಟು ಸುದರ್ಶನ ಚಕ್ರಹಿಡಿದು ಉರವಣಿಸಿ ಬಂದಾಗ, ಭೀಷ್ಮಾಚಾರ್ಯ ನಿರ್ಭಯವಾಗಿ ನಿಂತಿದ್ದಾನೆ. ಆಯುಧ ಹಿಡಿಯುವುದಿಲ್ಲವೆಂದು ಕೃಷ್ಣನ ಪಣ, ಹಿಡಿಸಿ ತೀರುತ್ತೇನೆಂದು ಭೀಷ್ಮನ ಪ್ರತಿಜ್ಞೆ.

ತನ್ನ ಪ್ರತಿಜ್ಞೆಯನ್ನು ಮರೆತು ಭಕ್ತನಾದ ಭೀಷ್ಮನ ಪ್ರತಿಜ್ಞೆಯನ್ನು ಸಫಲಗೊಳಿಸಿದನೋ ಕರುಣಾಮೂರ್ತಿ ಕೃಷ್ಣ!! ಅಥವ–ನೋಡು ನನ್ನ ಪ್ರತಿಜ್ಞೆಯ ಸತ್ಯತೆ ಎಂದು ವಿಜೃಂಭಿಸಿದನೋ, ಆ ವೀರಮೂರ್ತಿ ಭೀಷ್ಮ!! ಏನೇ ಆಗಲಿ ಯುದ್ಧರಂಗದಲ್ಲಿ ಅದೊಂದು ಅದ್ಭುತ ರಮ್ಯ ಮಹತ್ತರ ಸನ್ನಿವೇಶ. ನಿನ್ನ ಚಕ್ರಾಯುಧ ನನ್ನನ್ನೇನು ಮಾಡೀತು.–ಎಂದು ಅರ್ಭಟಿಸಿ ಮಾತಾಡುವ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | | |
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12–00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-) | | |
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ | 7–00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/–) | | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | | |
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

**ಪೇಷ್ಕಾರ್.**

ಭೀಷ್ಮ ಇಚ್ಛಾಮರಣದ ವರ ಪಡೆದಿದ್ದನೆಂಬುದನ್ನಿಲ್ಲಿ ಗಮನಿಸಬೇಕು. ಅದು ಆತನಿಗೆ, ತಂದೆ ಶಂತನು, ಅನುಗ್ರಹಿಸಿದ್ದ ಮಹತ್ವದ ವರ. ಲೋಕವೆಲ್ಲ ಮೃತ್ಯುವಿನ ಹಿಡಿತಕ್ಕೆ ಸಿಕ್ಕಿದೆ. ಆದರೆ ಮೃತ್ಯು ಭೀಷ್ಮನ ಹಿಡಿತಕ್ಕೆ ಸಿಕ್ಕಿದೆ. ಆತ ಬಾರೆಂದಾಗ ಸಾವು ಬರಬೇಕು ಬೇಡವೆಂದರೆ ಬೇಡ!! ಇಂತಹ ವೀರಮೂರ್ತಿಯನ್ನುರುಳಿಸುವುದು ಹೇಗೆ? ತನ್ನ ಸೋಲಿನ–ಸಾವಿನ–ರಹಸ್ಯವನ್ನು, ಭೀಷ್ಮನೇ ಬಾಯಿಬಿಟ್ಟು ಬಹಿರಂಗ ಪಡಿಸಬೇಕಾದ ಸನ್ನಿವೇಶವನ್ನು ತಂದೊಡ್ಡಿದ ದೈವದ ಮಾತಂತಿರಲಿ, ಇಲ್ಲಿ ಪ್ರಧಾನವಾಗಿ ಕಾಣುವುದು, ಧರ್ಮಕ್ಕೆ ಜಯವಾಗಲಿ ಎಂಬ ಘನ ಉದ್ದೇಶದಿಂದ ಪ್ರೇರಿತನಾಗಿ ಮಾತಾಡುವ ಭೀಷ್ಮನ ಔದಾರ್ಯ–ಸೌಜನ್ಯ–ಧೀರೋದಾತ್ತಗುಣ. ಶತ್ರುಗಳಿಗೆ ರಹಸ್ಯ ತಿಳಿಸುವುದು ಸೂಕ್ತವೇ? ತಿಳಿಸಬಾರದೆಂಬುದು ಯುದ್ಧ ಧರ್ಮ. ತಿಳಿಸಲೇ ಬೇಕೆಂಬುವುದು ಅಧಿಧರ್ಮ. ಧರ್ಮ–ಅಧಿಧರ್ಮಗಳ ಪ್ರಶ್ನೆ ಬಂದಾಗ, ಅಧಿಧರ್ಮದ ಕಡೆ ಬಾಗುವುದು ಸೂಕ್ತ ವೆಂಬ ಧರ್ಮಸೂಕ್ಷ್ಮವನ್ನರಿಯದ ಕ್ಷುದ್ರಜೀವಿಯಲ್ಲ ಕುರುಕುಲ ಪಿತಾಮಹ!! ಮೇಲಾಗಿ, ಪಾಂಡವರ ಹಿಂದೆ ದೈವ ಬಲವಿದೆಯೆಂಬುದನ್ನು ಬಲ್ಲ ಭೀಷ್ಮ ಅನೇಕಸಲಹೇಳಿದ್ದಾನೆ–

ಯತೋಧರ್ಮ ಸ್ತತೋಕೃಷ್ಣಃ
ಯತೋಕೃಷ್ಣ ಸ್ತತೋಜಯಃ

ತಾನೇ ಆಡಿದ ಮಾತಿಗೆ ವಿರೋಧವಾಗಿ ನಡೆಯುವ ಅವಿವೇಕಿಯಲ್ಲ ಭೀಷ್ಮ!! ನಡೆ, ನುಡಿ ವ್ಯವಹಾರ ಎಲ್ಲದರಲ್ಲೂ ಭೀಷ್ಮ, ತಾಯಿ ಜಾಹ್ನವಿಯಂತೆ ಪರಮ ಪರಿಶುದ್ಧ, ಪರಮ ಪಾವನ. ಆತ ಮನಸ್ಸು ಮಾಡಿದ್ದಿದ್ದರೆ ಕುರು ಸಾರ್ವಭೌಮನಾಗಬಹುದಿತ್ತು. ಆತನನ್ನು ತಡೆಯುವ ಯಾವ ಶಕ್ತಿಯೂ ಇರಲಿಲ್ಲ. ಆದರೆ ಭೀಷ್ಮ ತ್ಯಾಗಮೂರ್ತಿ. ಆತನಿಗಧಿಕಾರಲಾಲಸೆ ಇರಲಿಲ್ಲ. ಯಾವ ತಾಯಿ ಸತ್ಯವತಿಗಾಗಿ ಆತ ಬ್ರಹ್ಮಚರ್ಯದ ವ್ರತ ಹಿಡಿದ ಅದೇ ಸತ್ಯವತಿ ಮದುವೆಯಾಗುವಂತೆ ಒತ್ತಾಯ ಮಾಡಿದಳು. ಧನುರ್ವಿದ್ಯಾ ಪ್ರದಾನ ಮಾಡಿದ ಕ್ಷಾತ್ರ ಮೂರ್ತಿ ಪರಶು

(25 ನೇ ಪುಟ ನೋಡಿ)

# ಯಂತ್ರೋದ್ಧಾರಕ ಹನುಮಂತ

ಕನ್ನಡದಲ್ಲಿ ಮೊದಲಬಾರಿಗೆ ದೇವರ ನಾಮಗಳನ್ನು ರಚಿಸಿ ಹಾಡಿದ ಕೀರ್ತಿ ಶ್ರೀ ಶ್ರೀಪಾದರಾಜರದು. ಅಂಥ ಯತಿಶ್ರೇಷ್ಠರನ್ನು ಗುರುಗಳಾಗಿ ಪಡೆದ ಭಾಗ್ಯ ಶ್ರೀ ವ್ಯಾಸರಾಯರದು. ವ್ಯಾಸರಾಯರು ಹನ್ನೆರಡು ವರ್ಷಗಳ ಕಾಲ ಶ್ರೀಪಾದರಾಜರಲ್ಲಿ ವಿದ್ಯಾಭ್ಯಾಸ ಮಾಡಿ ಸಕಲವಿದ್ಯಾ ಪಾರಂಗತರೆನಿಸಿಕೊಂಡಿದ್ದರು.

ಗುರುಗಳ ಅಪ್ಪಣೆ ಪಡೆದು ದಕ್ಷಿಣದೇಶದ ಪ್ರಮುಖ ವಿದ್ಯಾಕೇಂದ್ರಗಳನೆಲ್ಲ ಸಂದರ್ಶಿಸಿ, ರಾಜಧಾನಿಗೆ ಹಿಂತಿರುಗುತ್ತಾ, ತಾವು ಸಂಪಾದಿಸಿದ ಕೀರ್ತಿ ಗೌರವಗಳನ್ನು ವಿದ್ಯಾಗುರುಗಳಿಗೆ ಸಲ್ಲಿಸಬೇಕೆಂಬ ಘನ ಉದ್ದೇಶದೊಂದಿಗೆ ಮುಳಬಾಗಿಲಿಗೆ ಬಂದು ಅಲ್ಲಿ ಶ್ರೀಪಾದರಾಜರಿಗೆ ತಮ್ಮ ಜಯಪತ್ರಗಳನ್ನು ಅರ್ಪಿಸಿದರು.

ಅಲ್ಲಿದ್ದಾಗ ವ್ಯಾಸರಾಯರಿಗೆ ಒಮ್ಮೆ ಸ್ವಪ್ನದಲ್ಲಿ, ತಾವು ಎಂದಿನಂತೆ ಬೆಳಗಿನ ಸ್ನಾನಮುಗಿಸಿ ಧ್ಯಾನಕ್ಕೆ ಕುಳಿತಿರುವಂತೆಯೂ, ಅಲ್ಲಿದ್ದ ಬಂಡೆಗಲ್ಲೊಂದರಿಂದ ಕಪಿಯೊಂದು ಎದ್ದು ಬಂದು ಎದುರಿನಲ್ಲಿ ಸುಳಿದಾಡಿದಂತೆಯೂ, ಕಣ್ಣು ತೆರೆಯುತ್ತಿದ್ದಂತೆ ಅದು ಮಾಯವಾದಂತೆಯೂ ಕಂಡಿತು.

ಮಾರನೆಯದಿನ ಅವರು ಆ ಊರಲ್ಲಿರುವ ಅರ್ಜುನನಿಂದ ಪ್ರತಿಷ್ಠಾಪಿತ, ಆಂಜನೇಯ ಸ್ವಾಮಿಯನ್ನು ತೃಪ್ತಿಯಾಗುವಷ್ಟು ಪೂಜಿಸಿದರು. ಆಗಲೂ ಅವರಿಗೊಂದು ದಿವ್ಯ ದರ್ಶನವಾಯಿತು.

ನೋಡ ನೋಡುತ್ತಿದ್ದಂತೆ ಆಂಜನೇಯನು ಎರಡು ವಿಗ್ರಹಗಳಾಗಿ ಎರಡರಿಂದ ನಾಲ್ಕಾದಂತೆಯೂ ನಾಲ್ಕು ಎಂಟಾದಂತೆ, ಹೀಗೆ ದ್ವಿಗುಣಿತವಾಗುತ್ತಾ ಹೋಗಿ ಅವರು ಈ ವಿಗ್ರಹಗಳನ್ನೆಲ್ಲ ಲೆಕ್ಕಹಾಕಿ ನೋಡಿದರು.

ಆಗ, ನಾಡಿನ ಜನತೆಯ ಹೃದಯವನ್ನು ಗೆದ್ದ, ವಾಯುಪುತ್ರನ ಪ್ರತೀಕಗಳನ್ನು ದೇಶದ ಮೂಲೆ ಮೂಲೆಗಳಲ್ಲಿ ಸ್ಥಾಪಿಸಬೇಕೆಂದೂ, ಈ ಮಂದಿರಗಳನ್ನು ಸಾಹಿತ್ಯ-ಕಲೆ-ವಿದ್ಯೆಗಳ ಕೇಂದ್ರಗಳನ್ನಾಗಿ ಮಾಡಿ, ಜನ ಸಾಮಾನ್ಯರಲ್ಲಿ ಭಗವದ್ಭಕ್ತಿ, ಸಂಸ್ಕೃತಿಗಳನ್ನು ಬೆಳಗಿಸಬೇಕೆಂದು ಸಂಕಲ್ಪ ಮಾಡಿದರು.

ವಿಜಯನಗರಕ್ಕೆ ಮರಳಿಬಂದ ಅವರು ಮರುದಿನ ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ತುಂಗಭದ್ರೆಯ ಚಕ್ರತೀರ್ಥದಲ್ಲಿ ಸ್ನಾನ ಮಾಡಿ, ಎಂದಿನಂತೆ ಜಪಕ್ಕೆ ಕುಳಿತುಕೊಳ್ಳುವ ಸ್ಥಳಕ್ಕೆ ಬಂದಾಗ, ಎಲ್ಲ ರೀತಿಯಿಂದಲೂ, ಸ್ವಪ್ನದಲ್ಲಿ ಸೂಚಿಸಲ್ಪಟ್ಟ ಬಂಡೆಗಲ್ಲೊಂದು ಅಲ್ಲಿ ಅವರಿಗೆ ಕಂಡಿತು. ಅವರು ಜಪಕ್ಕೆ ಕುಳಿತಾಗ ಅದರ ಒಳಗಿನಿಂದ ಕಪಿಯೊಂದು ಬಂದು, ಅವರ ಮುಂದೆ ಸುಳಿದು, ಧ್ಯಾನಕ್ಕೆ ಭಂಗ ತರತೊಡಗಿತು.

ಇದರಿಂದಾಗಿ ಎಚ್ಚೆತ್ತ ವ್ಯಾಸರಾಯರು ಆ ಬಂಡೆಗಲ್ಲಿನ ಮೇಲೆ ಅಂಗಾರದಿಂದ ಮುಖ್ಯಪ್ರಾಣನ ವಿಗ್ರಹವನ್ನು ಬರೆದು, ಅದಕ್ಕೆ ದ್ವಾದಶ ನಾಮಗಳನ್ನು ತಿದ್ದಿದರು.

ಕೂಡಲೇ ಆ ಮೂರ್ತಿಯು ಜೀವ ತಳೆದು ಬಂಡೆಗಲ್ಲಿನಿಂದ ಹೊರಬಂದಂತೆ ತೋರಿ ಮಾಯವಾಯಿತು. ಇದೇನು ಆಶ್ಚರ್ಯವೆಂದುಕೊಳ್ಳುತ್ತಾ ವ್ಯಾಸರಾಯರು, ಸ್ವಾಮಿಯು ನಮ್ಮನ್ನು ಪರೀಕ್ಷಿಸುವಂತಿದೆ ಎಂದು ಯೋಚಿಸುತ್ತಾ ಮತ್ತೆ ಮುಖ್ಯಪ್ರಾಣನ ವಿಗ್ರಹವನ್ನು ಬರೆದು ಅದಕ್ಕೆ ದ್ವಾದಶ ನಾಮಗಳನ್ನಿಟ್ಟರು.

ಅದೂ ಸಹ ಜೀವ ತಳೆದು ಬಂಡೆಯಿಂದ ಹಾರಿಹೋದಂತೆ ಭಾಸವಾಯಿತು.

ಇದೇ ರೀತಿ ಹನ್ನೆರಡು ಬಾರಿ ವ್ಯಾಸರಾಯರಿಗೆ ಅನುಭವವಾಯಿತು. ಆಗ ಅವರು ಮನದಲ್ಲಿಯೆ ಕ್ಷಣಕಾಲ ಆಂಜನೇಯನನ್ನು ಧ್ಯಾನಿಸಿದರು ಅಪರೋಕ್ಷಜ್ಞಾನಿಗಳಾದ ಅವರಿಗೆ ತಟ್ಟನೇ ಅದರ ಮರ್ಮ ತಿಳಿಯಿತು.

ಕೂಡಲೇ ಅವರು ಶ್ರೀಮಧ್ವಾಚಾರ್ಯರ ತಂತ್ರಸಾರ ಸಂಗ್ರಹದಲ್ಲಿ ನಿರೂಪಿಸಿರುವಂತೆ ಬಂಡೆಯಮೇಲೆ ಅಂಗಾರದಿಂದ ಯಂತ್ರ ಒಂದನ್ನು ಬರೆದು, ಅದರ ಮಧ್ಯದಲ್ಲಿ ಯೋಗಾಸನಾ ರೂಢನಾಗಿ, ಜಪಸರ ಹಿಡಿದು ಕುಳಿತ ಆಂಜನೇಯ ಮೂರ್ತಿಯನ್ನು ಬರೆದರು.

ಈ ಮೊದಲು ಹಾರಿಹೋದ ಹನ್ನೆರಡು ಕಪಿಗಳ ಬಂಧವನ್ನು ಮುಖ್ಯಪ್ರಾಣನಿಗೆ ಮಾಲಾಕಾರವಾಗಿ ಹೆಣೆದರು. ನಂತರ ಆಗಮೋಕ್ತ ದಿಗ್ಬಂಧನ ಮಾಡಿದರು. ಅಂಗಾರದಿಂದ ಬರೆದ ಈ ಚಿತ್ರವು ಇದ್ದಕ್ಕಿದ್ದಂತೆ ವಿಗ್ರಹವಾಗಿ ಕಾಣಿಸಿಕೊಂಡಿತು!

ಈ ಮೂರ್ತಿಗೆ ಯಂತ್ರೋದ್ಧಾರಕ ಪ್ರಾಣದೇವರೆಂದು ಅಭಿಧಾನವನ್ನಿತ್ತು, ದ್ವಾದಶನಾಮಗಳನ್ನು ತಿದ್ದಿ, ಪಂಚಾಮೃತ ಅಭಿಷೇಕ ಮಾಡಿ ಪಂಚವಾದ್ಯಗಳ ನೈವೇದ್ಯವನ್ನರ್ಪಿಸಿ, ಧೂಪದೀಪಾದಿಗಳಿಂದ ಪೂಜಿಸಿದರು. ಈ ಮೂರ್ತಿಯ ಮಹಿಮೆಯನ್ನು ಸಾರುವ ಅಷ್ಟಕವೊಂದನ್ನು ರಚಿಸಿದರು. ಈ ವಿಷಯ ತಿಳಿಯುತ್ತಲೇ, ಆಗಿನ ರಾಜನಾಗಿದ್ದ ಇಮ್ಮಡಿ ನರಸಿಂಹನು ಓಡಿಬಂದು ಸ್ವಾಮಿಗೆ ಒಂದು ಸಣ್ಣಗುಡಿಯನ್ನು ಕಟ್ಟಿಸಿದನು. ಇಂದಿಗೂ ತುಂಬಾ ಜಾಗ್ರತ ಸ್ಥಳವೆನಿಸಿದ ಇಲ್ಲಿ, ಪೂಜಿಸಿದವರ ಸಕಲ ಇಷ್ಟಾರ್ಥಗಳು ಈಡೇರುವವಲ್ಲದೇ, ಭೂತ, ಪ್ರೇತ ಪಿಶಾಚಿಗಳು ಬಿಟ್ಟು ಹೋಗುತ್ತವೆ. ಮಂತ್ರ ಸಿದ್ಧಿಯಾಗುತ್ತದೆ.

ಅಂದು ಶ್ರೀ ವ್ಯಾಸರಾಯರು ರಚಿಸಿದ ಪ್ರಾಣದೇವರ ಅಷ್ಟಕ ಈ ರೀತಿ ಇದೆ

ನಮಾಮಿ ದೂತಂ ರಾಮಸ್ಯ
ಸುಖದಂ ಚ ಸುರದ್ರುಮಮ್ ।

ಶ್ರೀಮತಿ ವಾಣಿ ಕುಲಕರ್ಣಿ

ಪೀನವೃತ್ತ ಮಹಾಬಾಹುಂ
ಸರ್ವಶತ್ರು ನಿವಾರಣಂ ||

ಸುಖಕರನೂ, ಕಲ್ಪ ವೃಕ್ಷರೂಪಿಯೂ ದೃಢ ಕಾಯನೂ, ಮಹಾಬಲಿಷ್ಠನೂ ಶತ್ರುನಾಶಕನೂ ಆದ ಶ್ರೀರಾಮುಬಂಟನನ್ನು ನಮಸ್ಕರಿಸುತ್ತೇನೆ.

ನಾನಾರತ್ನ ಸಮಾಯುಕ್ತ
ಕುಂಡಲಾದಿ ವಿರಾಜಿತಮ್ |
ಸರ್ವದಾಭೀಷ್ಟದಾತಾರಂ
ಸತಾಂ ವೈ ದೃಢ ಮಾಹವೇ ||
ವಾಸಿನಂ ಚಕ್ರ ತೀರ್ಥಸ್ಯ
ದಕ್ಷಿಣಸ್ಥೇ ಗಿರೌ ಸದಾ |
ತುಂಗಾಂಭೋಧಿ ತರಂಗಸ್ಯ
ವಾತೇನ ಪರಿಶೋಭತೇ ||

ರತ್ನ ಖಚಿತವಾದ ಕುಂಡಲವಲಯ, ಕೇಯೂರ ಮುಂತಾದ ವಿವಿಧಾಭರಣಗಳಿಂದಾಲಂಕೃತನೂ, ಸಜ್ಜನರ ಸಕಲಾಪೇಕ್ಷೆಗಳನ್ನು ಪೂರೈಸುವವನೂ, ಯುದ್ಧದಲ್ಲಿ ನಿಶ್ಚಲನೂ, ತುಂಗಭದ್ರೆಯ ನೀರಿನಲೆಗಳಿಂದ ಕೂಡಿದ ಸ್ಪಷ್ಟವಾಗಿ ಬೀಸುವ ಗಾಳಿಯಿಂದ ಅತಿ ವಿರಾಜಿತನಾಗಿರುವ, ಚಕ್ರತೀರ್ಥದ ದಕ್ಷಿಣಕ್ಕೆ ಇರುವ ಗುಡ್ಡದಲ್ಲಿ ಯಾವಾಗಲೂ ಸನ್ನಿಹಿತನಾಗಿರುವ.

ನಾನಾ ದೇಶ್ಯಗತೈಃ ಸಿದ್ಧಿಃ
ಸೇವ್ಯಮಾನಂ ನೃಪೋತ್ತಮೈಃ |
ಧೂಪದೀಪಾದಿ ನೈವೇದ್ಯೈಃ
ಪಂಚಖಾದ್ಯೈಶ್ಚ ಶಕ್ತಿತಃ ||
ಭಜಾಮಿ ಶ್ರೀ ಹನುಮಂತಂ
ಹೇಮ ಕಾಂತಿ ಸಮಪ್ರಭಮ್ |
ವ್ಯಾಸತೀರ್ಥ ಯತೀಂದ್ರೇಣ
ಪೂಜಿತಂ ಚ ವಿಧಾನತಃ ||

ಅನೇಕ ದೇಶಗಳಿಂದ ಬರುವ ಸಜ್ಜನರು ಮತ್ತು ರಾಜಶ್ರೇಷ್ಠರಿಂದ ಅವರ ಶಕ್ತ್ಯನುಸಾರವಾಗಿ ಪಂಚ ಕಜ್ಜಾಯಗಳಿಂದಲೂ ಧೂಪದೀಪ ನೈವೇದ್ಯಗಳಿಂದಲೂ ಸೇವಿತನಾದ, ಶೋಧಿಸಿದ ಚಿನ್ನದ ಕಾಂತಿಗೆ ಸರಿಸಮದ ಕಾಂತಿಯುಳ್ಳ ಶ್ರೀ ಹನುಮಂತನನ್ನು ಸೇವಿಸುತ್ತೇನೆ.

ತ್ರಿವಾರಂ ಯಃ ಪಠೇನ್ನಿತ್ಯಂ
ಸ್ತೋತ್ರಂ ಭಕ್ತ್ಯಾ ದ್ವಿಜೋತ್ತಮಃ |

(27ನೇ ಪುಟ ನೋಡಿ)

# ಭಾಗವತರ ಮಹಿಮೆ

ಶ್ರೀ ಸಿ. ಗೋವಿಂದಾಚಾರ್ಯ

ಮಾನವನಲ್ಲಿ ಭಗವದ್ಭಕ್ತಿ ಮೂಡುವುದು ಒಂದು ಅಪೂರ್ವವಾದ ಭಾಗ್ಯ. ತನ್ನ ಇಷ್ಟದೇವತೆಯಲ್ಲಿ ತೋರುವ ಆದರ, ಪ್ರೀತಿ ಮತ್ತು ಶ್ರದ್ಧೆಯೇ ಭಕ್ತಿ. ಭಗವತ್ಪ್ರಾಪ್ತಿಗೆ ದಾರಿ. ಇದೂ ಒಂದು ಯೋಗ. ಭಗವಂತನನ್ನು ನೆಟ್ಟಮನಸ್ಸಿನಿಂದ ಭಜಿಸುವುದೇ ಭಕ್ತನ ಧ್ಯೇಯ ಮತ್ತು ಗುರಿ. ಧೃಡ ಭಕ್ತಿಯಿಂದ ಮತ್ತು ನಿರಪರಾಧ ಕೈಂಕರ್ಯಗಳಿಂದ ಯಾರು ಅವನನ್ನು ಸಂತೋಷಪಡಿಸುವರೋ ಅಂತಹವರಿಗೆ ತನ್ನನ್ನೇ ಮಾರಿಕೊಳ್ಳುವನು– ಭಕ್ತಿಕ್ರೀತೋ ಜನಾರ್ದನಃ. ಪ್ರಹ್ಲಾದ, ಧ್ರುವ ಅಂಬರೀಷ, ಕುಚೇಲರಂತಹ ಧೃಡವ್ರತರು ದೊರಕುವರೆಂದರೆ ಹುಡುಕಿಕೊಂಡು ಹೋಗುವನು, ಬರುತ್ತಾರೆಂದರೆ ಕಾದು ಕುಳಿತಿರುವನು. ಭಕ್ತಸಮೂಹವಿದೆಯೆಂದರೆ ಅದರಲ್ಲಿ ಬೆರೆಯುವನು (ಗೀತೆ 10–9) ಶ್ರೀರಂಗನಾಥನು ಮಾಡುವುದೂ ಇದೆ, ಇದು ಭಾಗವತ ಗೋಷ್ಠಿಶ್ರೇಷ್ಠತೆಯ ಒಂದು ಉದಾಹರಣೆ ಭಕ್ತರಿಗಾಗಿ ಏನು ಬೇಕಾದರೂ ಮಾಡುವನು. ತನ್ನ ನೆಲೆಯಾದ ವೈಕುಂಠವನ್ನೇ ತೊರೆಯುವನು, ಯಾವ ವೇಷವನ್ನಾದರೂ ಧರಿಸುವನು. ಯಾವ ಪ್ರತಿಜ್ಞೆಯನ್ನಾದರೂ ಮಾಡುವನು, ಮಾಡಿದ ಪ್ರತಿಜ್ಞೆಯನ್ನು ಮೀರುವನು. ಭೀಷ್ಮನ ವಿರುದ್ಧ ಶಸ್ತ್ರವನ್ನು ಹಿಡಿಯುವುದಿಲ್ಲ ಎಂಬ ತನ್ನ ಪ್ರತಿಜ್ಞೆಗೆ ವಿರುದ್ಧವಾಗಿ ನಡೆದುಕೊಂಡ ಶ್ರೀಕೃಷ್ಣ ಮತ್ತು ಪರಮಭಾಗವತನೆಂಬ ಅಭಿಮಾನದಿಂದ ವಿದುರನ ಮನೆಯಲ್ಲಿ ಭೋಜನವನ್ನೂ ಮಾಡಿದ, ಭಕ್ತರಲ್ಲಿ ವಿಶೇಷ ಪ್ರೀತಿಯಿಂದ ಹೀಗೆ ಮಾಡುವನು.

## ಭಕ್ತ-ಭಾಗವತ :

ಈ ಎರಡು ಪದಗಳು ಒಂದೇ ನಾಣ್ಯದ ಎರಡು ಮುಖಗಳಾಗಿದೆ. ಭಕ್ತಿ ಸಾಮ್ರಾಜ್ಯದಲ್ಲಿ ಆರ್ತ, ಜಿಜ್ಞಾಸು, ಅರ್ಥಾರ್ಥಿ ಮತ್ತು ಜ್ಞಾನಿ ಎಂಬ ಚತುರ್ವಿಧ ಭಕ್ತರಿದ್ದಾರೆ. ಕಳೆದು ಕೊಂಡ ಐಶ್ವರ್ಯವನ್ನು ಹೊಂದಲು ಇಚ್ಛಿಸುವವನು ಆರ್ತ. ಆತ್ಮಾನುಭವವನ್ನು ಅಪೇಕ್ಷಿಸುವವನು ಜಿಜ್ಞಾಸು. ಹಿಂದೆಂದೂ ಹೊಂದಿಲ್ಲದ ಅಪೂರ್ವವಾದ ಐಶ್ವರ್ಯವನ್ನು ಆಶಿಸುವವನು ಅರ್ಥಾರ್ಥಿ ಭಗವಂತನೇ ಉಪಾಯ, ಉಪೇಯ, ಶೇಷಿ, ತಾನು ಶೇಷ ಎಂಬ ಜ್ಞಾನದಿಂದ ಭಗವತ್ಪ್ರಾಪ್ತಿಯನ್ನು ಅಪೇಕ್ಷಿಸುವನು ಜ್ಞಾನಿ. ಇವರುಗಳ ಪೈಕಿ ಜ್ಞಾನಿಯೇ ವಿಶಿಷ್ಟನು. 'ಅನನ್ಯ ಭಕ್ತಿಯಿಂದ ನನ್ನಲ್ಲೇ ಸ್ಥಿರವಾಗಿರುವ ಜ್ಞಾನಿಯಾದ ಭಕ್ತ ಭಾಗವತೋತ್ತಮನೇ ನನಗೆ ಪ್ರಿಯನಾದವನು ಮತ್ತು ನಾನೂ ಅವನಿಗೆ ಅತೀವ ಪ್ರಿಯನು' ಎಂದು ಎಂದು ಗೀತಾಚಾರ್ಯನೇ ಹೇಳಿದ್ದಾನೆ.

'ತೇಷಾಂ ಜ್ಞಾನೀ ನಿತ್ಯಯುಕ್ತಃ
ಏಕಭಕ್ತಿಃ ವಿಶಿಷ್ಯತೇ।
ಪ್ರಿಯೋಹಿ ಜ್ಞಾನಿನೋತ್ಯರ್ಥಂ
ಅಹಂ ಸ ಚ ಮಮ ಪ್ರಿಯಃ ॥
(ಗೀತೆ 7–17)

ಪರಮೈಕಾಂತಿಯಾದ ಇಂತಹ ಭಾಗವತೋತ್ತಮನು ಪರಭಕ್ತಿ, ಪರಜ್ಞಾನ ಮತ್ತು ಪರಮ ಭಕ್ತಿಗಳೆಂಬ ಮೂರು ಹಂತಗಳಲ್ಲಿ (ಜ್ಞಾನಾವಸ್ಥೆಗಳು) ಭಗವಂತನನ್ನೇ ಹೊಂದುವವನಾಗಿದ್ದಾನೆ. ಮಹಾಭಾರತದ ಪ್ರಕಾರ ಭಾಗವತರೆಂದರೆ ಭಗವತ್ಸಂಬಂಧಿಗಳು ಹಾಗೂ ಸಂಪ್ರದಾಯ. ಆಚಾರ ವ್ಯವಹಾರಗಳಲ್ಲಿ ವಿಶಿಷ್ಟರಾಗಿರುವ ಶಿಷ್ಟಾಚಾರ ಸಂಪನ್ನರು. ತ್ಯಾಗಶೀಲರು, ವೇದ ಮಾರ್ಗಾನುಸಾರಿಗಳೂ ಆದ ಇವರು ಯಾವಾಗಲೂ ತಮ್ಮ ಬುದ್ಧಿಯನ್ನು ಪರತತ್ತ್ವಗಲ್ಲೇ ನಿಯೋಜಿಸಿ ಆಚಾರ್ಯರ ಉಪದೇಶಾನುಸಾರವಾಗಿ ನಡೆಯುವ ಶಿಷ್ಟಾಚಾರ ಸಂಪನ್ನರೂ, ಮತ್ತು 'ತನ್ನಂತೆಯೇ ಇತರರು' ಎಂಬ ನೀತಿಯಂತೆ ಸಹ ಭಕ್ತ ಭಾಗವತರಲ್ಲಿ ಗೌರವಾದರಗಳನ್ನು ತೋರುವ ಸತ್ಪುರುಷರಾಗಿದ್ದಾರೆ. (ವನ ಪರ್ವ) ಇದೇ ಭಾವಾರ್ಥದಲ್ಲಿ ವೇದಾಂತ ದೇಶಿಕರು ಹೇಳಿದ್ದಾರೆ "ಪ್ರತಿವ್ರತಾ ಶಿರೋಮಣಿಯ ಹಾಗೆ ಭಗವಂತನಲ್ಲಿ ಸಂಬಂಧಿಸಿದವರು ಸ್ಥಿರಧಿಯರು, ಭ್ರಮೆಯಿಲ್ಲದವರು, ಪರಿಶುದ್ಧಾತ್ಮರು. ಅಪರಾಧವೆಂಬ ದೋಷವಿಲ್ಲದವರು" – ರಹಸ್ಯತ್ರಯಸಾರ. ಪುರುಷಾರ್ಥಕಾಷ್ಠಾಧಿಕಾರ ಅಲೌಕಿಕ ಗುಣವುಳ್ಳ ಇಂತಹ ಮಹನೀಯರ ಸಂಗ ದುರ್ಲಭ – 'ಸಮಹಾತ್ಮಾ ಸುದುರ್ಲಭಃ' (ಗೀತೆ 7–9) ಇವರನ್ನು ಸಾಮಾನ್ಯ ಮನುಷ್ಯರೆಂದು ಭಾವಿಸಕೂಡದು. ಭಾಗವತರ ವಿಷಯದಲ್ಲಿ ಭಗವಂತನು ಅತ್ಯಂತ ಆಸಕ್ತಿ ಮತ್ತು ಕುತೂಹಲವುಳ್ಳವನಾಗಿದ್ದಾನೆ. ಎಂದು ಗೋದಾದೇವಿಯು ತಿರುಪ್ಪಾವೈಯಲ್ಲಿ ವ್ಯಕ್ತಪಡಿಸಿದ್ದಾಳೆ. ಪುತ್ರನ ಉಪಲಾಲನವು ತಂದೆಗೆ ಹೇಗೆ ಸಂತಸ ತರುವುದೋ ಅದೇ ರೀತಿಯಲ್ಲಿ ಭಾಗವತ ಕೈಂಕರ್ಯವು ಭಗವಂತನಿಗೆ ಅತ್ಯಂತ ಅಭಿಮತವಾದುದು. ಆದ್ದರಿಂದ ಭಾಗವತ ಕೈಂಕರ್ಯವನ್ನು ಅನುಷ್ಠಿಸಬೇಕು. ಇದೇ ಸ್ವರೂಪಗುಣ ಇದನ್ನು ಭಗವಂತನೇ ಮಾಡಿ ತೋರಿಸಿ ಕೊಟ್ಟಿದ್ದಾನೆ.

ಶ್ರೀಕೃಷ್ಣನು ಮಹಾಭಾಗವತನಾದ ಕುಚೇಲನಿಗೆ ಮಾಡಿದ ಕೈಂಕರ್ಯದಿಂದಲೂ ಮತ್ತು ಶತ್ರುಘ್ನ ಪ್ರವೃತ್ತಿಯಿಂದಲೂ ಭಾಗವತಶೇಷತ್ವ ಪ್ರಕಟವಾಯಿತು. ಶತ್ರುಘ್ನನು ಯಾವಾಗಲೂ ಭಕ್ತೋತ್ತಮನಾದ ಭರತನ ಕೈಂಕರ್ಯದಲ್ಲೇ ಸದಾ ನಿರತನಾದ್ದರಿಂದ ಬಹುಸುಲಭವಾಗಿ ಕೃತಕೃತ್ಯತೆಯನ್ನು ಹೊಂದಿದನು. ವಸಿಷ್ಠ, ವಿಶ್ವಾಮಿತ್ರ ಭರದ್ವಾಜ ಮಹರ್ಷಿಗಳಲ್ಲಿ ಶ್ರೀರಾಮನು ತೋರಿದ ಶೇಷ ಭಾವ, ಭಾಗವತ ಶೇಷತ್ವದ ಮತ್ತೊಂದು ನಿದರ್ಶನ ವಿಪ್ರನಾರಾಯಣರು ತಾವು ಎಂದೆಂದಿಗೂ 'ಭಾಗವತರ ಪಾದಧೂಳಿ' ಎಂದು ವರ್ತಿಸುತ್ತಿದ್ದರು. ಭಾಗವತ ಶೇಷತ್ವದಲ್ಲೇ ಅಭಿರುಚಿ ಉಂಟಾದ್ದರಿಂದ 'ಭಕ್ತಾಂಘ್ರಿರೇಣು' (ತೊಂಡರಡಿಪ್ಪೊಡಿ) ಎಂಬ ಹೆಸರನ್ನೇ ಧರಿಸಿದ್ದಾರೆ. ಭಾಗವತರ ಪಾದಗಳನ್ನು ಸೇವಿಸುವುದೇ ಪುರುಷಾರ್ಥವೆಂಬುದನ್ನು ಪೂದತ್ತಾಳ್ವಾರರು



ಓಂ ಶ್ರೀ ಮಾತ್ರೇ ನಮಃ

ಫೋನ್ :
ಕಚೇರಿ : 472013
ಮನೆ : 861254

# ನವಶಕ್ತಿನಿಲಯದವರಿಂದ ಭಕ್ತರಿಗೆ ವಿಶಿಷ್ಟ ಕೊಡುಗೆ

ಜಗದ್ಗುರು ಶ್ರೀ ಕಂಚಿಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ತಿರುಮುರುಗ ಕೃಪಾನಂದ ವಾರಿಯರ್ ಮತ್ತಿತರ ಸಂತರ ಆಶಿಸ್ಸುಗಳನ್ನು ಹೊಂದಿ ದಿವ್ಯಯಂತ್ರಗಳನ್ನು ತಯಾರ ಮಾಡುವ ಸಂಸ್ಥೆ.

1. ಶ್ರೀ ಮಹಾಮೇರು ಪಂಚಲೋಹಯಂತ್ರ
   16×16 cm ಹಾಗೂ 10×10cm (ವೈಯಕ್ತಿಕ)
2. ಶ್ರೀ ಮಹಾಮೇರು ಪಂಚಲೋಹ ಯಂತ್ರ
   6×6 cm ರೂ. 550–00
3. ಶ್ರೀ ಮಹಾಮೇರು ಪಂಚಲೋಹ
   4 ×4 cm ರೂ. 350–00
4. ಶ್ರೀ ಮಹಾಗಣಪತಿ ಯಂತ್ರ 8×8 cm ರೂ. 130–00
5. ಶ್ರೀಚಕ್ರ ಬೀಜಾಕ್ಷರದೊಡನೆ
   42×42 cm ಹಾಗೂ 32×32 cm (ವೈಯಕ್ತಿಕ)
6. ಶ್ರೀ ಮಹಾಲಕ್ಷ್ಮಿ ಮಹಾಯಂತ್ರ
   24×24 cm ರೂ. 1150–00
7. ಶ್ರೀ ಮಹಾಸುದರ್ಶನ ಯಂತ್ರ
   16×16 cm ರೂ. 600–00
8. ಶ್ರೀಚಕ್ರಯಂತ್ರ 8×8 cm ರೂ. 130–00
9. ಚಿದಂಬರ ಚಕ್ರ 8×8 cm ರೂ. 130–00
10. ಸುಬ್ರಹ್ಮಣ್ಯ ಯಂತ್ರ 8×8 cm ರೂ. 130-00
11. ಸುದರ್ಶನ ಯಂತ್ರ 8×8 cm ರೂ. 130–00
12. ನವಗ್ರಹ ಯಂತ್ರ 8×8 cm ರೂ. 130-00
13. ಸರ್ವಜನ ಧನ ಆಕರ್ಷಣ, ಶ್ರೀ ಸಾಮ್ರಾಜ್ಯಲಕ್ಷ್ಮಿ
    ಶ್ರೀ ಮಹಾಸುದಶನಂ 16×48 cm ರೂ. 1600–00
14. ಸರ್ವಜನ ಧನ ಆಕರ್ಷಣ ಶ್ರೀ ಸಾಮ್ರಾಜ್ಯಲಕ್ಷ್ಮಿ
    ಶ್ರೀ ಮಹಾಸುದರ್ಶನ 8×24 cm ರೂ. 450–00
15. ಶೂಲಿನಿ, ಶರಭೇಶ್ವರ, ಪ್ರತಿಂಗಾರ 16×48 cm
    ರೂ. 1600–00
16: ದಶಮಹಾನಿಧಿಗಳು ಯಂತ್ರಗಳು (ವೈಯಕ್ತಿಕ)
17. ದೃಷ್ಟಿನಿವೃತ್ತಿ ಹಾಗೂ ಸುದರ್ಶನ ಪದಕ ರೂ. 65–00
18. ಕಾಮಾಕ್ಷಿ ಶ್ರೀಚಕ್ರ ಪದಕ ರೂ. 65–00
19. ಕಾಮಾಕ್ಷಿ, ಧನ ಆಕರ್ಷಣ ಪದಕ ರೂ. 65–00
20. ಕಾಮಾಕ್ಷಿ, ಮಾಂಗಲ್ಯಭಾಗ್ಯ ಪದಕ ರೂ. 65–00
21. ಶ್ರೀ ಮುರುಗನ್ ಆಕರ್ಷಣ ಪದಕ ರೂ. 55–00
22. ವಿವಾಹಪ್ರಾಪ್ತಿ ಪದಕ ರೂ. 65–00
23. ಶ್ರೀ ಅಯ್ಯಪ್ಪನ್ ಪದಕ (ಸನ್ನಿಧಿಯೊಡನೆ) ರೂ. 65–00
24. ಶ್ರೀಚಕ್ರಂ ಲಕ್ಷ್ಮಿ ಬೀಜದೊಡನೆ ರೂ. 65–00
25. ಶ್ರೀದೇವಿ ಕರುಮಾರಿ ಅಮ್ಮನ್ ಹಿತ್ತಾಳೆ ಪದಕ ರೂ. 65–00
26. ನವಗ್ರಹ ಪದಕ ಬೊಂಬೆಗಳು ಯಂತ್ರಗಳೊಡನೆ ರೂ. 65–00
27. ದೃಷ್ಟಿನಿವಾರಕ ಯಂತ್ರ ಫ್ರೇಂನೊಡನೆ ರೂ. 65–00
28. ವಿದ್ಯುದೀಕ್ಷಿತ ಹಿತ್ತಾಳೆ ಕಡಗ
    12 ರಾಶಿಗಳಿಗೆ–ಒಂದೊಂದೂ ರೂ. 25–00
29. ತುಲಸೀ ಮಾಲೆ 54 ಮಣಿಗಳು ರಜತ ಕವಚದೊಡನೆ
    ರೂ. 125–00
30. ರುದ್ರಾಕ್ಷಿಮಾಲೆ 54 ಮಣಿಗಳು ರಜತಕವಚದೊಡನೆ
    ರೂ. 300-00
31. ಸಹಜ ಕಮಲಮಾಲೆ 54 ಮಣಿಗಳು " ರೂ. 180-00
32. ರಸಲಿಂಗ, ಸ್ಫಟಿಕಲಿಂಗ, ಮರಕತಲಿಂಗ
    ಬಾನಲಿಂಗ, ಸಾಲಿಗ್ರಾಮ, ಪಂಚಾಯತನ
    ಸೆಟ್, ವಲಂಪುರಿ ಶಂಖ, ಪಂಚಲೋಹ
    ವಿಗ್ರಹ, ಪಾದರಸಮಣಿ ಪಾದರಸ ವಿನಾಯಕ
    ಸಹ ದೊರೆಯುವುವು ಬೆಲೆ ವ್ಯಕ್ತಿಗತ.

ಇವಲ್ಲದೆ 108 ಇತರ ಯಂತ್ರಗಳೂ ನಮ್ಮಲ್ಲಿ ದೊರೆಯುವುವು. ದೇವಾಲಯಗಳಿಗೆ, ಗೃಹಪೂಜಾಮಂದಿರಗಳಿಗೆ, ಗ್ರಾಮದೇವತೆಗಳಿಗೆ ಆಗತ್ಯವಾದ ಯಂತ್ರಗಳು ದೊರೆಯುತ್ತವೆ. ಒಂದೊಂದು ಯಂತ್ರವೂ ರೂ. 150-00. ವಿವರಗಳಿಗಾಗಿ 50 ಪೈಸೆ ಸ್ಟಾಂಪ್ ಹಚ್ಚಿದ ಕವರನ್ನು ಕೆಳಗಣ ವಿಳಾಸಕ್ಕೆ ಕಳುಹಿಸಿ. ಕ್ಯಾಟಲಾಗ್ ಉಚಿತ, ವಿದೇಶಿ ಅಭ್ಯರ್ಥನೆಗಳನ್ನು 25% ಹೆಚ್ಚಿನ ಬೆಲೆಯೊಡನೆ ಅಂಗೀಕರಿಸಲಾಗುವುದು.

ಉತ್ತರ ಪ್ರತ್ಯುತ್ತರಗಳು ಆಂಗ್ಲಭಾಷೆಯಲ್ಲಿ ಮಾತ್ರವೇ ನಡೆಯುವುವು.

ವಿಶ್ವಕರ್ಮಜ್ಞ ಶ್ರೀ ವಿದ್ಯೋಪಾಸಕ
ಸ್ವಾಮೀಜಿ ಶ್ರೀ ಎಸ್. ಮುರುಗಭೂಷಣಂ,
ಅಧ್ಯಕ್ಷರು, ನವಶಕ್ತಿ ನಿಲಯ, 153, ಲಾಯಡ್ಸ್ ರೋಡ್,
(ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎದುರು)
ಗೋಪಾಲಪುರಂ, ಮದ್ರಾಸು 600086

'ಲೋಕಾಃ ಸಮಸ್ತಾಃ ಸುಖಿನೋಭವಂತು'

"ತಾಳಿರಂಡುಂ ಆರ್‌ತೋಳುವಾರ್ ಪಾದ ವಮ್ಮೈ ತೋಳುವದನ್ರೇ" ಎಂದು ಇರಂಡಾಂ ತಿರುವಂದಾದಿಯಲ್ಲಿ ನಿರೂಪಿಸಿದ್ದಾರೆ. ಆದ್ದರಿಂದ ಭಾಗವತಾರಾಧನೆಯು ಭಗವದಾರಾಧನಿಂತ ಶ್ರೇಷ್ಠವಾದುದು. ಮತ್ತು ಭಗವಂತನಿಗೆ ಅತ್ಯಂತ ಪ್ರಿಯವಾದುದು. ಭಾಗವತರ ಶ್ರೀಪಾದತೀರ್ಥವು ಗಂಗೆಗಿಂತಲೂ ಹೆಚ್ಚು ಮಹಿಮೆಯುಳ್ಳದ್ದು ಎಂದು ಸ್ವಾಮಿ ದೇಶಿಕನ್ ಹೇಳಿದ್ದಾರೆ. "ಭಾಗವತರ ಶ್ರೀಪಾದಧೂಳಿಯಲ್ಲಿ ನಾವು ಅವಗಾಹ ಸ್ನಾನ ಮಾಡಿದ ಮೇಲೆ ಗಂಗೆಯಲ್ಲಿ ಸ್ನಾನ ಮಾಡುವ ಆಶೆ ಇನ್ನೇಕೆ?" ಎಂದು ಕುಲಶೇಖರಾಳ್ವಾರರು ಹೇಳಿ ಭಾಗವತರ ಹಿರಿಮೆಯನ್ನು ಎತ್ತಿ ಹಿಡಿದಿದ್ದಾರೆ. (ಪೆರುಮಾಳ್ ತಿರುಮೊಳಿ ೩-೩) ಆದರೆ ಅವಿವೇಕಿಯಾದ ಮಾನವನು ಅಜ್ಞಾನದಿಂದ ಮತ್ತು ಅಚಾತುರ್ಯದಿಂದ ನಾನಾ ವಿಧವಾದ ಅಪಚಾರಗಳನ್ನು ಮಾಡುವನು ಮತ್ತು ದೈವ ನಿಯಮವನ್ನು ಮೀರಿ ಪಾಪಕ್ಕೆ ಗುರಿಯಾಗುವನು. ಎಲ್ಲ ರೀತಿಯ ಅನಿಷ್ಟಗಳಿಗೆ ಕರ್ಮವೇ ಕಾರಣ. ಅಕೃತ್ಯಕರಣ ಕೃತ್ಯಾಕರಣ, ಭಗವದಪಚಾರ, ಭಾಗವತಾಪಚಾರಗಳೇ ಮನುಷ್ಯ ಮಾಡುವ ಅಪರಾಧಗಳು. ಇವುಗಳು ಒಂದಕ್ಕಿಂತ ಒಂದು ಕ್ರೂರತರವಾದದು. ಇವುಗಳ ಪೈಕಿ ಭಾಗವತರೂಪಗಳಲ್ಲಿ ಮಾಡುವ ದೋಷ, ಔದಾಸೀನ್ಯ, ಪರಿಹಾಸ್ಯ ಮುಂತಾದುವೆಲ್ಲ ಅತ್ಯಂತ ಕೀಳಾದ ಪಾಪಭೂಯಿಷ್ಠವಾದ ಅಸಹ್ಯಾಪಚಾರಗಳು. ಮನಸ್ಸಿನಲ್ಲಾಗಲಿ, ಮಾತಿನಲ್ಲಾಗಲಿ ವರ್ತನೆಯಲ್ಲಾಗಲಿ ಭಾಗವತರುಗಳಲ್ಲಿ ಅಪಚಾರ ಕೂಡದೆಂದು ಸಕಲ ಶಾಸ್ತ್ರಗಳ ಸಾರಾರ್ಥ. ಎಲ್ಲಕ್ಕಿಂತ ಇದು ಪ್ರಬಲವಾದ ಹಾಗೂ ದೇವರು ಸಹಿಸದ ಅಪಚಾರ. ಕಾಕಾಸುರನು ಮಾಡಿದ್ದು ಇದೇ. ಇವು ಪರಬ್ರಹ್ಮ ಪ್ರಾಪ್ತಿಗೆ ವಿರೋಧವಾಗಿದೆ.

'ನನ್ನ ಭಕ್ತರಾದ ಪಾಂಡವರನ್ನು ದ್ವೇಷಿಸುವುದರಿಂದ ನನಗೂ ನೀನು ದ್ವೇಷಿ' ಎಂದು ಶ್ರೀಕೃಷ್ಣನು ದುರ್ಯೋಧನನಿಗೆ ಹೇಳುವನು. ಹಿರಣ್ಯನು ಪ್ರಹ್ಲಾದನಿಗೆ ದ್ವೇಷಿಯಾದ್ದರಿಂದ ಶ್ರೀಹರಿಗೂ ದ್ವೇಷಿಯಾದ. ಹಿರಣ್ಯನನ್ನು ಸಂಹರಿಸಿದ್ದು ಪರಮ ಭಾಗವತನಾದ ಪ್ರಹ್ಲಾದನನ್ನು ಹಿಂಸಿಸಿದುದಕ್ಕಾಗಿಯೇ ಹೊರತು ಶ್ರೀಹರಿಗೆ ತಲೆಬಾಗಲಿಲ್ಲವೆಂದಲ್ಲ. ತನ್ನ ವಿಷಯದಲ್ಲಿ ಹಿರಣ್ಯನು ಅನೇಕ ಅಪರಾಧಗಳನ್ನು ಮಾಡಿದರೂ ಭಗವಂತನು ಸುಮ್ಮನಿದ್ದ ಆದರೆ ಭಕ್ತನಲ್ಲಿ ಮಾಡಿದ ಅಪರಾಧಕ್ಕಾಗಿ ಸ್ವಾಮಿ ಕನಲಿದ. ಆದ್ದರಿಂದ ಭಾಗವತ ದ್ರೋಹಿಗಳಾದ ದುರ್ಜನರು ಭಗವಂತನಿಗೂ ಶತ್ರುಗಳು.

ಅನೇಕ ಮಹನೀಯರಿಗಾದ ಅಪಚಾರ ಪ್ರಸಂಗಗಳನ್ನು ಮತ ಚರಿತ್ರೆಗಳಲ್ಲಿ ಕಾಣಬಹುದು. ಉದಾ. ತಿಳಿಗೇಡಿಗಳಿಂದ ದೇಶಿಕರಿಗಾದ ಅಪಚಾರ. ಕೆಲವರು. ಪಾದರಕ್ಷೆ ಮಾಲೆಯನ್ನು ಇವರ ತಲೆಗೆ ತಗಲುವಂತೆ ಮನೆ ಮುಂದೆ ಕಟ್ಟಿದ್ದರು ಇನ್ನೂ ಕೆಲವರು ಇವರನ್ನು ದೂರಿದ್ದಲ್ಲದೆ ಗಾಯಗೊಳಿಸಿದರು. ಇವು ಬುದ್ಧಿ ಪೂರ್ವಕವಾಗಿ ಮಾಡಿದ ಕ್ರೂರವಾದ ಅಪಚಾರಗಳು. ಇಂತಹವುಗಳು, ಸಂಪ್ರದಾಯ, ಆಚಾರ ನಿಯಮ ಕ್ರಮಗಳಲ್ಲಿ ಭಿನ್ನಾಭಿಪ್ರಾಯ, ಹಿಳಜಗಳ, ಕೋಮುವಾರು ಗಲಭೆ ಇತ್ಯಾದಿ ಕಾರಣಗಳಿಂದ ಇಂತಹ ಅಪಚಾರಗಳು ಉತ್ಪತ್ತಿಯಾಗಿವೆ. ಇವುಗಳ ಜೊತೆಗೆ ಕೆಲವು ಅವಿವೇಕಿಗಳು, ಪುಂಡರು ತಿಳಿದೋ ಅಥವಾ ತಿಳಿಯದೆಯೋ ಇಂತಹ ಅಸಹ್ಯಾಪಚಾರಗಳನ್ನು ಮಾಡಿ ಅನರ್ಥವನ್ನೇ ಉಂಟು ಮಾಡಿದ್ದಾರೆ. ಉದಾ–ಭಾಗವತರು ಮನೆಗೆ ಬಂದರೆ ಅಲಕ್ಷ್ಯದಿಂದ ಕಾಲು ಚಾಚಿ ಕುಳಿತೇ ಇರುವುದು, ಏಕವಚನದಲ್ಲಿ ವ್ಯವಹರಿಸುವುದು, ಕಟುವಾದ ಮಾತುಗಳು, ವೃತ್ತಿಯ ಬಗ್ಗೆ ಕೀಳಾಗಿ ಮಾತಾಡುವುದು ಇತ್ಯಾದಿ. ತೀರ್ಥಸ್ನಾನ, ಕ್ಷೇತ್ರಯಾತ್ರೆಗಳಿಂದ ಪರಿಹಾರವಾಗದ ಈ ಪಾಪಗಳು ಪ್ರಾರಬ್ಧ ಕರ್ಮವಾಗಿ ಕಾಡಿಸುವುವು. ಇವು ನಡೆಯಬೇಕಾದರೆ ಅನುಭವಿಸಿಯೇ ತೀರಬೇಕು 'ಅನಭ್ಯುಪಗತ ಪ್ರಾರಬ್ಧಃ'

ಭಗವಂತನು ಭಕ್ತ ಭಾಗವತರ ವಿಷಯದಲ್ಲಿ ಅಮೃತದಂತಿದ್ದಾನೆ. ತನ್ನ ಔದಾರ್ಯ ಮತ್ತು ಸೌಶೀಲ್ಯಗಳಿಂದ ಅಪಚಾರಗಳನ್ನು ಕ್ಷಮಿಸುವವನಾಗಿದ್ದಾನೆ. ಭಗವಾನ್ ಭಾಷ್ಯಕಾರರು ಶ್ರೀರಂಗನಾಥನನ್ನು ಈ ರೀತಿ ಪ್ರಾರ್ಥಿಸುತ್ತಾರೆ "ಮನಸ್ಸು ಮತ್ತು ಶರೀರಗಳ ಮೂಲಕ ಅನಾದಿಕಾಲದಿಂದಲೂ ನಾನು ಮಾಡಿರುವ ವಿವಿಧ ಅಸಹ್ಯಾಪಚಾರಗಳು ತೊಲಗಿ ಹೋಗಲಿ, ನನ್ನನ್ನು ಕ್ಷಮಿಸು"–"ಮನೋವಾಕ್ಕಾಯೈಃ ಅನಾದಿಕಾಲ ಪ್ರವೃತ್ತ ಅನಂತ............... ಸರ್ವಾನ್ ಅಶೇಷತಃ ಕ್ಷಮಸ್ವ" (ಶರಣಾಗತಿಗದ್ಯ) 'ಕ್ಷಮೆ' ಎಂಬ ಭಾಗವತ ಪ್ರಸಾದವೇ ಪರಿಹಾರ. ಇದೂ ಭಾಗವತ ಶೇಷತ್ವದ ಮಹಿಮೆಯನ್ನೇ ಹೇಳುವುದು. ಇದರಲ್ಲಿ ಮೇಲುಕೀಳೆಂಬ ಭೇದವಿಲ್ಲ. ವಾನರ ದೊರೆ ಸುಗ್ರೀವನು ಕ್ಷತ್ರಿಯನಾದ ಲಕ್ಷ್ಮಣನಲ್ಲಿ ಮಾಡಿದ ಅಪಚಾರಕ್ಕೆ 'ಕ್ಷಮಿಸು' ಎಂದು ಅಂಜಲೀಬದ್ಧನಾಗಿ ಲಕ್ಷ್ಮಣನಲ್ಲಿ ಪ್ರಾರ್ಥಿಸುವನು "ಯದಿ ಕಿಂಚಿದತಿ ಕ್ರಾಂತಂ ವಿಶ್ವಾಸಾತ್ ಪ್ರಣಯೇನ ವಾ ಪ್ರೇಷ್ಯಸ್ಯ ಕ್ಷಮಿತವ್ಯಂ". ಅಂಜಲಿಗೆ ಅಷ್ಟು ಮಹಾತ್ಮೆಯಿದೆ. ಅಂಬರೀಷ ಕ್ಷತ್ರಿಯ, ಪರಮಭಾಗವತ. ದೂರ್ವಾಸರು ಅಂಬರೀಷನಲ್ಲಿ ಮಾಡಿದ ಅಪಚಾರದಿಂದ ಚಕ್ರವು ಅವರನ್ನು ಹಿಂಬಾಲಿಸತೊಡಗಿತು. ರಕ್ಷಣೆಗಾಗಿ ಶ್ರೀಹರಿಯನು ಪ್ರಾರ್ಥಿಸಲು "ನಾನು ಭಕ್ತ ಪರಾಧೀನ ಸ್ವತಂತ್ರನಲ್ಲ ಅಂಬರೀಷನಲ್ಲೇ ಮರಳಿ ಹೋಗಿ ಅವನಲ್ಲೇ ಕ್ಷಮೆ ಬೇಡು" ಎಂದು ಶ್ರೀಹರಿಯು ಮುನಿಗೆ ಉಪದೇಶ ಮಾಡುವನು.

ಬ್ರಹ್ಮನ್ ತದ್ಗಚ್ಛ ಭದ್ರಂ ತೇ
ನಾಭಾಗತನಯಂ ನೃಪಂ
ಕ್ಷಮಾಪಯ ಮಹಾಭಾಗ
ತತಃಶಾಂತಿರ್ಭವಿಷ್ಯತಿ

(ಅಂಬರೀಷೋಪಾಖ್ಯಾನ)

ಈ ನಿದರ್ಶನಗಳು "ಮಮ ಮದ್ಭಕ್ತ ಭಕ್ತೇಷು ಪ್ರೀತಿ ರಭ್ಯಧಿಕಾ ಭವೇತ್" ಎಂಬ ಅವನ ದಿವ್ಯವಾಣಿಯನ್ನು ಪ್ರಕಾಶ ಪಡಿಸುವುವು ಮಹಾ ಭಾಗವತೆಯಾದ ಶಾಂಡಿಲಿಯ ಬಗ್ಗೆ ಗರುಡನು ಮನಸ್ಸಿನಲ್ಲಿ ಅಪಚಾರ ಪಟ್ಟದ್ದಕ್ಕೆ ಅವನ ರೆಕ್ಕೆಗಳು ಸೋತು ಹೋದವು, ಅವಳ ಪ್ರಸನ್ನತೆಯಿಂದ ಅವುಗಳು ಎಂದಿನಂತೆ ಕಾರ್ಯೋನ್ಮುಖವಾದವು. ಭಾಗ–

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ–517501

ತಾಪಚಾರದಿಂದ ಭಗವನ್ನಿಗ್ರಹಕ್ಕೆ ಗುರಿಯಾಗ ಕೂಡದು. ಏಕೆಂದರೆ ಅದು ಸ್ವರೂಪಕ್ಕೆ ಹಾನಿಕರವಾದದ್ದು ಮತ್ತು ಮೋಕ್ಷ ಫಲಕ್ಕೆ ಅಡ್ಡಿ ಮಾಡುವಂತಹದ್ದು ಎಂದು ತಿರುವರಂಗತ್ತು ಅಮುದನಾರ್ ಅಭಿಪ್ರಾಯಪಟ್ಟಿದ್ದಾರೆ. ಭಾಗವತರಲ್ಲಿ ಕ್ಷಮೆಯನ್ನು ಯಾಚಿಸದಿರುವ ಅಪರಾಧಿಗಳನ್ನು ಭಗವಂತನು ಶಿಕ್ಷೆಗೆ ಗುರಿಪಡಿಸುವನು ಮತ್ತು ಅಂತಹವರಿಗೆ ದಂಡನೆಯನ್ನು ವಿಧಿಸುವನು ಒಂದುವೇಳೆ ತಿಳಿಯದೆ ಭಕ್ತ ಭಾಗವತರೇ ತಪ್ಪು ಮಾಡಿದರೆ ಲಘುದಂಡನೆಯನ್ನು ವಿಧಿಸುವನು ಉದಾ–ಲೋಕಸಾರಂಗ ಮುನಿ ಮತ್ತು ಪಾಣನಾಥರು–ಇಬ್ಬರೂ ಭಕ್ತರೆ. ಮುನಿಯು ಆಳ್ವಾರರಲ್ಲಿ ಅಪಚಾರ ಪಟ್ಟಿದ್ದಕ್ಕಾಗಿ "ಪಾಣರನ್ನು ಹೆಗಲ ಮೇಲೆ ಹೊತ್ತು ನನ್ನ ಬಳಿಗೆ ಬಾ" ಎಂದು ದೊಡ್ಡದೇವನು ಮುನಿಗೆ ಲಘುದಂಡನೆಯನ್ನು ಕೊಡುವನು. ರಾಜನು ತನ್ನ ಸಾರ್ವಭೌಮಾಧಿಕಾರತ್ವದಿಂದ 'ನನ್ನ ಪಲ್ಲಕ್ಕಿಯನ್ನು ಹೊರಿ' ಎಂದು ಭಾಗವತರಿಗೆ ಆಜ್ಞೆ ಮಾಡುವುದೂ ಅಪಚಾರ (ಸೌವೀರರಾಜನ ವೃತ್ತಾಂತ ವಿಷ್ಣುಪುರಾಣ) 'ಏನು ನಿಮ್ಮ ವಸ್ತ್ರ ಮತ್ತು ಯಜ್ಞೋಪವೀತ ಇಷ್ಟು ಬೆಳ್ಳಗಿದೆಯಲ್ಲ" ಎಂದು ವಿಡಂಬನೆಯಿಂದ ಅಪಚಾರವಾದರೆ ಮನಸ್ಸಿಗೆ ಬೇಸರವಾಗುವುದು. ಅವರಲ್ಲಿ ಕ್ಷಮೆ ಬೇಡುವುದೇ ಪರಿಹಾರ. ದೇಶಿಕರಲ್ಲಿ ಅಪಚಾರ ಪಟ್ಟವರು ಕ್ರಮೇಣ ಅವರಲ್ಲಿ ಕ್ಷಮೆ ಯಾಚಿಸಿದರು. ಪಶ್ಚಾತ್ತಾಪ ಪಡುವುದರೊಂದಿಗೆ ಅಂತಹ ಅಪಚಾರಗಳನ್ನು ಪುನಃ ಮಾಡಬಾರದು ಎಂಬ ಧೃಡ ನಿರ್ಧಾರವನ್ನು ಕೈಗೊಳ್ಳಬೇಕು. ಆದ್ದರಿಂದ ತಪ್ಪಿತಸ್ಥರಿಗೆ ಭಾಗವತರಲ್ಲಿ ಕ್ಷಮಾಪಣೆಯೇ ಪ್ರಾಯಶ್ಚಿತ್ತ.

ಭಕ್ತಿ ದೊಡ್ಡದೇ ಹೊರತು ಜಾತ್ಯಾಶ್ರಮಗಳು ದೊಡ್ಡವಲ್ಲ. ಭಕ್ತರನ್ನು ಗಣ ಕರ್ಮಗಳಿಂದ ನೋಡಬೇಕು. ಭಾಗವತ ಬ್ರಾಹ್ಮಣ ಮತ್ತು ಭಾಗವತ ಶೂದ್ರ–ಇಬ್ಬರೂ, ಜನ್ಮ ವೃತ್ತಿ ಮತ್ತು ವರ್ತನೆಗಳಲ್ಲಿ ಬೇರೆಯಾಗಿದ್ದರೂ ಭಗವತ್ಸಂಶ್ಲೇಷವುಂಟಾದ್ದರಿಂದ ಜಾತಿ ಭೇದ ಬರುವುದಿಲ್ಲ. ನಿಷ್ಠಾವಂತನಾದ ಶೂದ್ರ ಭಾಗವತನೆಂದು ಭಾವಿಸಬೇಕು. ಶ್ರುತಿಯು ಇದನ್ನೇ ಹೇಳುವುದು. ಜನಾರ್ದನನಲ್ಲಿ ಯಾರು ಅಭಕ್ತರೋ ಅವರು ಶೂದ್ರನಿಗೆ ಸಮಾನರು. ಉತ್ತಮ ಜಾತಿಯವನು ತನ್ನ ಸ್ವಧರ್ಮವನ್ನು ತ್ಯಜಿಸಿ ಕರ್ಮಭ್ರಷ್ಟನಾಗಿ ಶೂದ್ರನ ಹಾಗೆ ವರ್ತಿಸಬಹುದು. ಸದ್ವೃತ್ತಿಯಿಂದಲೂ ಒಳ್ಳೆಯ ದೆಶೆಯುಂಟಾಗಬಹುದು. ಉದಾ ಕಾಶಿಕರಿಗೆ ವಿಪ್ರತ್ವ ಬಂದದ್ದು. ಈ ಭಾವಾರ್ಥದಲ್ಲೇ ಕಲಿಯನರು 'ಕುಲಂ ತರುಂ' (ಪೆರಿಯ ತಿರುಮೊಳಿ 1–1–9) ಎಂಬ ಪಾಶುರದಲ್ಲಿ ಹೇಳಿದ್ದಾರೆ. ಕೀಳಜಾತಿಯ ಭಾಗವತರನ್ನು ಕೀಳಾಗಿ ಕಾಣಬಾರದು ಮತ್ತು ಅಸೂಯೆಯಿಂದ ತಿರಸ್ಕಾರ ಮಾಡಬಾರದು. ಇದನ್ನೇ 'ಪಯಿಲುಮ್ ಶುಡರಳಿ' ಎಂಬ ಪಾಶುರದಲ್ಲಿ ನಮ್ಮಾಳ್ವಾರರು ಸೂಚಿಸಿದ್ದಾರೆ. ಆದ್ದರಿಂದ ಯಾವ ಭಾಗವತನಾದರೂ ಪೂಜನೀಯ. ಅಂತಹವನ ವಿಷಯದಲ್ಲಿ ಗೌರವಾದರಗಳಿಂದ ನಡೆದು ಕೊಳ್ಳಬೇಕು. ಉದಾ- ಭಾಗವತಾಗ್ರೇಸರನಾದ ವಿದುರನ ಬಗ್ಗೆ ಪಾಂಡವಾದಿಗಳು ತೋರಿದ ಗೌರವ "ಮಹಾ ಪರಿಶುದ್ಧಾತ್ಮರಾದ ತಮ್ಮಂಥಾ ಭಾಗವತರು ಶ್ರೀಹರಿಯನ್ನೂ ಸದಾ ಮನಸ್ಸಿನಲ್ಲಿಟ್ಟಿರುವುದರಿಂದ ಪುಣ್ಯತೀರ್ಥಗಳು ಪವಿತ್ರವಾಗುವುವು."

'ಗುರುಂ ಪ್ರಕಾಶಯೇತ್ ಧೀಮಾನ್' ಎಂಬ ನೀತಿಯಂತೆ ಭಾಗವತರು ಮಾಡಿದ ಉಪಕಾರಗಳನ್ನು ಕೊಂಡಾಡಬೇಕು. ಅವರ ಬಗ್ಗೆ ವಿಶೇಷ ಅಭಿಮಾನವಿಟ್ಟಿರಬೇಕು 'ಶ್ರೀರಂಗೇ ಸುಖಮಾಸ್ವ' ಎಂದು ದೇವರೇ ಹೇಳಿದಂತೆ ಭಾಗವತರ ಸಾನ್ನಿಧ್ಯವಿದ್ದ ಸ್ಥಳವೇ ಪವಿತ್ರವಾದುದು ಮತ್ತು ಸುಖಕರವಾದುದು. ಅಂತಹ ಕ್ಷೇತ್ರದಲ್ಲೇ ವಾಸಿಸಬೇಕು. ಅವರ ಅನುಗ್ರಹವನ್ನೇ ಸ್ವಯಂ ಪ್ರಯೋಜನವನ್ನಾಗಿ ಬಯಸಿ ಅವರ ಸಂಗವನ್ನೇ ಮಾಡಬೇಕು (ಸತ್ವಾತ್ ಸಂಜಾಯತೆ ಜ್ಞಾನಂ) ಕೂರೇಶರು ಭಗವತ್ಸನ್ನಿಧಿಗಿಂತ ಭಾಗವತ ಮಂಡಲಿಯಲ್ಲಿ ಅನ್ವಯಿಸುವುದೇ ಪುರುಷಾರ್ಥ' ಎಂದು ಶ್ರೀವೈಕುಂಠಸ್ತವದಲ್ಲಿ ವ್ಯಕ್ತಪಡಿಸಿದ್ದಾರೆ. (ಪರಿಜನ್ಯೈ ಸ್ತವ ಸಂಗನೀಯ.)

(24 ನೇ ಪುಟ ನೋಡಿ)

ಧಾರಾವಾಹಿ

# ಭಾರತೀಯ ಪರಮಾರ್ಥ

## ಭೇದಾಭೇದ ಮತ್ತು ಘಟಕ ಶ್ರುತಿಗಳು

ಶ್ರೀ ಎಂ.ಓ. ಎಸ್. ಅಯ್ಯಂಗಾರ್

ಪರಬ್ರಹ್ಮನಿಗೂ ಚಿದಚಿದ್ರೂಪವಾದ ಜಗತ್ತಿಗೂ ಇರುವ ಪರಸ್ಪರ ಸಂಬಂಧದ ವಿಷಯದಲ್ಲಿ ಉಪನಿಷತ್ತುಗಳಲ್ಲಿ, ಬೇರೆ ಬೇರೆ ಅಭಿಪ್ರಾಯಗಳನ್ನು ಕೊಡುವಂತೆ ತೋರುವ ಅನೇಕ ವಾಕ್ಯಗಳಿರುವುವು. ಅವುಗಳನ್ನು ವೇದಾನ್ತಿಗಳು 1. ಭೇದ ಶ್ರುತಿವಾಕ್ಯಗಳು, 2. ಅಭೇದಶ್ರುತಿ ವಾಕ್ಯಗಳು ಮತ್ತು 3. ಘಟಕ ಶ್ರುತಿ ವಾಕ್ಯಗಳು ಎಂದು ಮೂರು ಪಂಗಡವಾಗಿ ವಿಭಾಗಿಸಿರುವರು. 1. ಭೇದಶ್ರುತಿ ವಾಕ್ಯಗಳು ಪರಬ್ರಹ್ಮನೂ ಚಿದಚಿತ್ತುಗಳೂ ಬೇರೆ ಬೇರೆ, ಅವು ಒಂದೇ ಅಲ್ಲ ಎಂಬ ಅಭಿಪ್ರಾಯವನ್ನು ಕೊಡುವುವು. ಉದಾಹರಣೆಗೆ "ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ" (ಶ್ವೇ. 1–6) ಎಂದರೆ ಪರಮಾತ್ಮನೂ ಜೀವಾತ್ಮರೂ ಬೇರೆಬೇರೆ, ಒಂದೆ, ಅಲ್ಲ ಎಂದು ತಿಳಿ– ಎಂದು ವಿಶದವಾಗಿ ಹೇಳಿರುವುದು. "ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ। ತಯೋರನ್ಯಃ ಪಿಪ್ಪಲಂಸ್ವಾದ್ವತ್ಯನಶ್ನನ್ನನ್ಯೋ ಅಭಿಚಾಕಶೀತಿ" (ಮುಂ. 3-1-1) –ಎಂದರೆ ಒಂದೇ ವೃಕ್ಷದಲ್ಲಿ (ಎಂದರೆ ಶರೀರದಲ್ಲಿ) ಸ್ನೇಹದಿಂದಿರುವ ಎರಡು ಪಕ್ಷಿಗಳು (ಎಂದರೆ ಜೀವಾತ್ಮ ಪರ–ಮಾತ್ಮರು) ವಾಸಿಸುತ್ತಿರುವರು. ಅವುಗಳಲ್ಲಿ ಒಂದು ಪಕ್ಷಿ (ಎಂದರೆ ಜೀವಾತ್ಮನು) (ಕರ್ಮ) ಫಲಗಳನ್ನು ಭುಜಿಸುತ್ತಿರುವುದು. ಮತ್ತೊಂದು (ಎಂದರೆ ಪರಮಾತ್ಮನು) ಏನನ್ನೂ ಭುಜಿಸದೆ ಪ್ರಕಾಶಮಾನವಾಗಿರುವುದು –ಎಂದು ಜೀವಾತ್ಮ ಪರಮಾತ್ಮರು ಬೇರೆಬೇರೆ ಎಂದು ಸ್ಪಷ್ಟಪಡಿಸಿರುವುದು. ಹಿಂದೆ ಭಗವದ್ಗೀತೆಯಲ್ಲಿ "ಉತ್ತಮಃ ಪುರುಷಸ್ತ್ವನ್ಯಃ" ಎಂಬ ಶ್ಲೋಕದಲ್ಲೂ ಜೀವಾತ್ಮರಿಗಿಂತಲೂ ಪರಮಾತ್ಮನು ಬೇರೆಯಾದವನು ಎಂದು ಸ್ಪಷ್ಟವಾಗಿ ಹೇಳಿರುವುದು. ಇಂಥಾ ಉದಾಹರಣೆಗಳು ಶ್ರುತಿಸ್ಮೃತಿಗಳಲ್ಲಿ ಅನೇಕವಿರುವುವು.

2. ಅಭೇದಶ್ರುತಿಗಳು ಜೀವಾತ್ಮಪರಮಾತ್ಮರುಗಳು ಒಂದೇ ಎಂಬ ಅಭಿಪ್ರಾಯವನ್ನು ಕೊಡುವಂತಿರುವುವು. ಉದಾಹರಣೆಗೆ "ತತ್ತ್ವಮಸಿ" (ಛಾಂ. 6–8–7) ಎಂದರೆ ನೀನೇ ಪರಮಾತ್ಮನು ಎಂದು ಇಬ್ಬರಿಗೂ ಅಭೇದವನ್ನು ಕಲ್ಪಿಸುವಂತಿರುವುದು.

"ಅಹಂಬ್ರಹ್ಮಾಸ್ಮಿ" ಎಂದರೆ ನಾನೇ ಬ್ರಹ್ಮನು ಎಂದು ಅರ್ಥವನ್ನು ಕೊಡುವಂತಿದ್ದು ಜೀವಬ್ರಹ್ಮರಿಗೆ ಅಭೇದವನ್ನು ಸೂಚಿಸುವುದು.

3. ಘಟಕಶ್ರುತಿಗಳು- ಈ ಚೇತನಾಚೇತನಗಳೆಲ್ಲವೂ ಪರಮಾತ್ಮನ ಶರೀರಗಳು ಪರಮಾತ್ಮನು ಅವುಗಳ ಆತ್ಮ (ಶರೀರಿ) ಎಂದು ಹೇಳುವುದು. ಉದಾಹರಣೆಯಾಗಿ "ಯೋ ಆತ್ಮನಿತಿಷ್ಠನ್ನಾತ್ಮನೋಽನ್ತರೋ ಯಮಾತ್ಮಾನವೇದ ಯಸ್ಯಾತ್ಮಾ ಶರೀರಂ। ಯ ಆತ್ಮಾನಮಂತರೋ ಯಮಯತಿ ಆತ್ಮಾ ಅಂತರ್ಯಾಮ್ಯಮೃತಂ" (ಬೃ. 5–7–22) ಎಂದರೆ ಯಾವನು ಆತ್ಮನೊಳಗೆ ಅಂತರ್ಯಾಮಿಯಾಗಿದ್ದು ಆ ಆತ್ಮನನ್ನು ನಿಯಮಿಸುತ್ತಿರುವನೋ ಯಾವನನ್ನು ಆತ್ಮನು ಅರಿಯಲಾರನೋ, ಯಾವನಿಗೆ ಆತ್ಮವು ಶರೀರವೋ ಅವನೇ ಅಮೃತ ಸ್ವರೂಪನಾದ ಪರಮಾತ್ಮನು -ಎಂಬುವುದೊಂದು ಘಟಕ ಶ್ರುತಿ ವಾಕ್ಯವು. ಇಲ್ಲಿ ಹೇಳಿರುವ ಆತ್ಮ ಪದದಲ್ಲಿರುವ ಏಕವಚನವು ಜಾತ್ಯೇಕ ವಚನ, ಆತ್ಮರುಗಳಿಗೆಲ್ಲಾ ಅನ್ವಯಿಸುವುದು. ಇದೇ ರೀತಿಯಲ್ಲಿ...ಯಃ ಪೃಥಿವೀ ಶರೀರಂ;... ಯಸ್ಯ ವಾಯು ಶರೀರಂ ;... ಯಸ್ಯಾಕಾಶಶರೀರಂ;... ಯಸ್ಯಾದಿತ್ಯಶರೀರಂ;... ಯಸ್ಯಮೃತ್ಯು ಶರೀರಂ ಇತ್ಯಾದಿಯಾಗಿ ಜಗತ್ತಿನಲ್ಲಿರುವ ಚರಾಚರಗಳೆಲ್ಲವೂ (ಬೃ. ಉ. 5–7–2 ರಿಂದ 22) ಪರಮಾತ್ಮನ ಶರೀರಗಳೆಂದು ಅದೇ ಉಪನಿಷತ್ತು ಹೇಳಿರುವುದು. "ಜಗತ್ಸರ್ವಂ ಶರೀರಂತೇ" ಎಂದು ಇತಿಹಾಸಗಳಲ್ಲಿ ಹೇಳಿರುವುದು.

ಸಕಲ ಜಗತ್ತಿಗೂ ಮಾತೃಸ್ವರೂಪವಾಗಿರುವ ವೇದವು ಬೇರೆಬೇರೆ ವಿರುದ್ಧಾರ್ಥಗಳನ್ನು ಹೇಳಿ ಜನರನ್ನು ವಿರುದ್ಧ ಮಾರ್ಗಗಳಿಗೆ ಎಳೆಯಲಾರದು. ಸರಿಯಾಗಿ ವಿಮರ್ಶಿಸಿ ಅರ್ಥಮಾಡಿದರೆ ಸಮಂಜಸವಾದ ಒಂದೇ ಅರ್ಥವು ಅವೆಲ್ಲಕ್ಕೂ ಏರ್ಪಡುವುದು ಎಂಬ ಅಭಿಪ್ರಾಯದಿಂದ ಪರಿಶೋಧಿಸಿರುವರು. ಘಟಕಶ್ರುತಿಗಳ ಸಹಾಯದಿಂದ ಈ ಭೇದಾಭೇದ ಶ್ರುತಿಗಳ ಅರ್ಥಸಾಮಂಜಸ್ಯವನ್ನು ಮಾಡಬಹುದು ಎಂಬುದು ಅವರ ಅಭಿಪ್ರಾಯ. ಪರಮಾತ್ಮನು ಜೀವಾತ್ಮರಲ್ಲಿ ಅಂತರ್ಯಾಮಿಯಾಗಿ ಆತ್ಮಾವಾಗಿದ್ದು ಜೀವಾತ್ಮನನ್ನು ತನ್ನ ಶರೀರವಾಗಿ ಹೊಂದಿರುವನು ಎಂದು ಹೇಳಿರುವುದರಿಂದ ಶರೀರವಾಚಕಗಳಾದ ಶಬ್ದಗಳು ತದಂತರ್ಯಾಮಿಯಾದ ಆತ್ಮನನ್ನೂ ನಿರ್ದೇಶಿಸುತ್ತವೆ; ಮತ್ತು ಆ ಆತ್ಮನೂ ಶರೀರವಾಚಕ ಶಬ್ದದಿಂದ ಕರೆಯಲ್ಪಡುತ್ತಾನೆ ಎಂಬ ನ್ಯಾಯಶಾಸ್ತ್ರ ವ್ಯವಹಾರವಿರುವುದರಿಂದ ಇವೆರಡಕ್ಕೂ ವ್ಯವಹಾರದಲ್ಲಿ ಅಭೇದವನ್ನು ಸೂಚಿಸಿದಂತಾಗುವುದು. ಈ ವಿಷಯವು ಹಿಂದೆಯೇ ಸೂಚಿಸಲ್ಪಟ್ಟಿದೆ. 'ದೇವದತ್ತ'ನೆಂಬ ನಾಮವು ಒಬ್ಬನ ಹೆಸರಾದರೆ ಆ ಶರೀರ ಮತ್ತು ದೇವದತ್ತನ ಆತ್ಮ ಇವೆರಡೂ ಬೇರೆಬೇರೆ ಪದಾರ್ಥಗಳಾದಾಗ್ಯೂ ವ್ಯವಹಾರದಲ್ಲಿ ಆ ಭೇದವನ್ನು ಕಳೆದುಕೊಂಡು ಅವೆರಡೂ ಒಂದೇ ಹೆಸರಿನಿಂದ ನಿರ್ದೇಶಿಸಲ್ಪಡುವುವು. ಅದರಂತೆಯೇ ದೇವದತ್ತನ ಆತ್ಮನಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನೂ ಅದೇ ಹೆಸರಿನಿಂದ ಕರೆಯಲ್ಪಡುವನು. ಘಟಕಶ್ರುತಿಗಳೆಲ್ಲವೂ ಈ ವಿಧವಾದ ಭೇದಾಭೇದ ಸಮನ್ವಯವನ್ನು ಮಾಡುತ್ತವೆ. ಮೇಲಿನ ಅಭೇದಶ್ರುತಿ ವಾಕ್ಯಗಳಲ್ಲಿ "ಅಹಂ ಬ್ರಹ್ಮಾಸ್ಮಿ" ಎಂಬ ವಾಕ್ಯಕ್ಕೆ "ಅಹಂಬ್ರಹ್ಮಾತ್ಮಕಮಸ್ಮಿ" ಎಂದರೆ ನಾನು ಬ್ರಹ್ಮವನ್ನು ಆತ್ಮಾವಾಗಿ ಉಳ್ಳವನು ಎಂದು ಅರ್ಥಮಾಡಿದಾಗ ಅಭೇದ ಭಾವನೆ ಹೋಗಿ ನಾನು ಪರಬ್ರಹ್ಮನ ಶರೀರ ಎಂದು ಅರ್ಥವಾಗುವುದು. ಹೀಗೆ ಅರ್ಥಮಾಡುವುದರಿಂದ ಆ ವಾಕ್ಯಕ್ಕೆ ಯಾವ ಕೊರತೆಯೂ ಸಂಭವಿಸುವುದಿಲ್ಲ. "ತತ್ತ್ವಮಸಿ ಶ್ವೇತಕೇತೋ'' ಎಂಬ ಶ್ರುತಿವಾಕ್ಯವು ಎಲ್ಲೈ ಶ್ವೇತಕೇತುವೇ ! ನೀನೂ ಬ್ರಹ್ಮಾತ್ಮಕನು' ಎಂಬ ಅರ್ಥವನ್ನು ಕೊಡುವುದರಿಂದ ಅದಕ್ಕೆ ಯಾವ ಕೊರತೆಯೂ ಇರದು. ಹೀಗೆ ಅರ್ಥನಿರ್ಣಯ ಮಾಡುವಾಗ ಶ್ರುತಿವಾಕ್ಯಗಳೆಲ್ಲವೂ ವಿರುದ್ಧಾರ್ಥಗಳಿಗೆ ಅವಕಾಶವಿಲ್ಲದಂತೆ ಸರ್ವವೇದಾಂತ ಸಾಮಂಜಸ್ಯವು ಏರ್ಪಡುವುದು. ಅದೇರೀತಿಯಲ್ಲಿ "ಸರ್ವಂಖಲ್ವಿದಂ ಬ್ರಹ್ಮ–ನೇಹನಾನಾಸ್ತಿ ಕಿಂಚನ" ಎಂಬ ವೇದಾನ್ತವಾಕ್ಯಗಳು ಈ ದೃಶ್ಯ ಪ್ರಪಂಚದಲ್ಲಿರುವ ಸಮಸ್ತವೂ ಬ್ರಹ್ಮಾತ್ಮಕವೇ–ಬ್ರಹ್ಮಾತ್ಮಕವಲ್ಲದ್ದು ಯಾವುದೂ ಇಲ್ಲ ಎಂಬ

# ತಿ. ತಿ. ದೇವಸ್ಥಾನಗಳು, ತಿರುಪತಿ.

# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

| | |
|---|---|
| ಶ್ರೀನಿವಾಸನ ಹಾಡುಗಳು–ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) | 4–50 |
| ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ | 12–50 |
| ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ | 7–00 |
| ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ | 3–75 |
| ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ | 2–25 |
| ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು | 4–00 |
| ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ | 3–00 |
| ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ | 10–00 |
| ಆಚಾರಗಳು ಆಡಂಬರಗಳು –ಕೆ. ಚಂದ್ರಮೌಳಿ | 0–40 |
| ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) | 0–50 |
| " " (ಕನ್ನಡ ಲಿಪಿಯಲ್ಲಿ) | 0–12 |

**ಮಕ್ಕಳಿಗಾಗಿ :**

| | | |
|---|---|---|
| ಶ್ರೀಪಾದರಾಜರು | –ಎಂ. ಎಸ್. ಗುಂಡೂರಾವ್ | 0–75 |
| ಮಹಿಪತಿದಾಸರು | –ಶಾನಭಾಗ | 0–85 |
| ಪ್ರಸನ್ನ ವೆಂಕಟದಾಸರು | –ವಿ. ಬಾದರಾಯಣಮೂರ್ತಿ | 0–80 |
| ಗೋಪಾಲದಾಸರು | –ರುಕ್ಮಿಣಿಗಿರಿಮಾಜಿ | 0–75 |

### ಹಿಂದಿ :

| | |
|---|---|
| ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ|| ಎಂ. ಸಂಗಮೇಶಂ | 0–20 |
| ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) | 11–00 |
| ತೀರ್ಥರಾಜ ತಿರುಪತಿ ಡಾ|| ಎಂ. ಸಂಗಮೇಶಂ | 1–50 |

### ಸಂಸ್ಕೃತ :

| | |
|---|---|
| ಶ್ರೀ ವೇಂಕಟೇಶ್ವರ ಸುಪ್ರಭಾತಂ | 0–12 |
| ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ | 0–62 |
| ಕಠೋಪನಿಷತ್ –ಡಾ|| ಕೆ.ಸಿ. ವರದಾಚಾರಿ ಹಾಗೂ ಡಾ|| ಡಿ. ತಾತಾಚಾರ್ಯ | 15–00 |
| ಮಾರ್ಕಂಡೇಯ ಸಂಹಿತಾ | 18–00 |
| ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ | 2–00 |
| ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ | 30–00 |
| ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ | 16–00 |
| ಸೀತಾರಾಮಾಂಜನೇಯಂ –ಡಾ|| ಡಿ. ಅರ್ಕಸೋಮಯಾಜಿ | 50–00 |
| ಪ್ರಶ್ನೋಪನಿಷತ್ | 11–00 |
| ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ –ಸಂ ಡಾ|| ಎಸ್.ಬಿ. ರಘುನಾಥಾಚಾರ್ಯ | 25–00 |

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ1000 ರೂ|| 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

ಅರ್ಥವನ್ನು ಹೇಳಿ ಈ ಶರೀರ ಶರೀರಿ ಸಂಬಂಧವನ್ನು ಸ್ಥಿರಪಡಿಸುವುದು.

ಈ ಶರೀರಿ ಶರೀರ ಭಾವವನ್ನೇ ಮುಂದುವರಿಸಿ "ಯಜ್ಞಯಾಗಾದಿಗಳಲ್ಲಿ ಇಂದ್ರಾದಿದೇವತೆಗಳಲ್ಲಿ ಯಾರನ್ನು ಪೂಜಿಸಿದರೂ ತದಂತರ್ಯಾಮಿ (ಶರೀರಿ) ಯಾದ ತನ್ನನ್ನೇ ಪೂಜಿಸಿದಂತಾಗುವುದು ಎಂದು (ಭ ಗೀ 9–23) ಶ್ರೀಕೃಷ್ಣನು ಹೇಳಿರುವನು. ಸಮಸ್ತ ಚಿದಚಿತ್ತುಗಳಿಗೂ ಪರಮಾತ್ಮನು ಶರೀರಿಯಾದ್ದರಿಂದ ಸಮಸ್ತ ಪದಾರ್ಥಗಳ ಹೆಸರೂ ಅವನಿಗೂ ಅನ್ವಯಿಸುವುದು. ಇದೇ (ಭ. ಗೀ. 15–15) ಭಾವದಿಂದಲೇ "ವೇದೈಶ್ಚ ಸರ್ವೈರಹಮೇವವೇದ್ಯಂ" ಎಂದರೆ ವೇದಗಳಲ್ಲಿ ಉಚ್ಚರಿಸುವ ಹೆಸರುಗಳೆಲ್ಲವೂ ನನ್ನನ್ನೇ ನಿರ್ದೇಶಿಸುತ್ತವೆ ಎಂದು ಶ್ರೀಕೃಷ್ಣನು ಹೇಳಿರುವನು. ಈ ಭಾವನೆಗಳೆಲ್ಲವೂ ಎಷ್ಟು ಉತ್ಕೃಷ್ಟಗಳಾದವುಗಳೆಂಬುವುದು ತೋರದಿರಲಾರದು.

ಬ್ರಹ್ಮಜ್ಞಾನದಿಂದ ಬ್ರಹ್ಮವೇ ಆಗಲಾರನು :—

ಆದರೆ ಯಾವ ಯುಕ್ತಿ ನ್ಯಾಯದಿಂದಲೂ ಭೇದಶ್ರುತಿಗಳಿಗೆ ಅಭೇದವನ್ನು ಸಮರ್ಥಿಸುವುದಕ್ಕಾಗುವುದಿಲ್ಲವೆಂಬುದು ಇದರ ನಿರ್ಣಯ. "ಬ್ರಹ್ಮವಿತ್ ಬ್ರಹ್ಮೈವಭವತಿ" (ಮುಂ. 3-2-9) ಎಂಬ ವಿವರಣದಿಂದ ಬ್ರಹ್ಮವಿತ್ ಬ್ರಹ್ಮ ಇವ ಭವತಿ" ಎಂಬ ವಿವರಣದಿಂದ ಬ್ರಹ್ಮವನ್ನು ಅರಿತವನು ಬ್ರಹ್ಮಸಮಾನನಾಗುವನು ಎಂದು ಅರ್ಥವಾಗುವುದು. ಎಲ್ಲಾವಿಧದಲ್ಲೂ ಸಂಪೂರ್ಣವಾಗಿ ಬ್ರಹ್ಮವೇ ಆಗಲಾರನು ಎಂಬುವುದನ್ನು ಬ್ರಹ್ಮಸೂತ್ರದಲ್ಲಿ ಶ್ರೀ ವೇದವ್ಯಾಸ ಮಹರ್ಷಿಗಳು ಸ್ಪಷ್ಟಪಡಿಸಿರುವರು. "ಜಗದ್ವ್ಯಾಪಾರ ವರ್ಜ್ಯಂ ಪ್ರಕರಣಾದಸನ್ನಿಹಿತಾಚ್ಚ" (ಶಾ.ಮಿ. 4–4–17) ಎಂಬ ಸೂತ್ರದಲ್ಲಿ ಮುಕ್ತಜೀವನಿಗೆ ಜಗತ್ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ಅನ್ವಯವಿಲ್ಲವೆಂದು ಸ್ಪಷ್ಟಪಡಿಸಿರುವರು. ಹಾಗೆಯೇ ಮೋಕ್ಷಪ್ರದತ್ವವು ಪರಮಾತ್ಮನಿಗೊಬ್ಬನಿಗೇ ಇರುವುದೇ ವಿನಾ ಮುಕ್ತಜೀವರಿಗೆ ಮೋಕ್ಷಪ್ರದತ್ವವಿಲ್ಲ. ಅದರಿಂದಾಗಿ ಈಶ್ವರನೊಬ್ಬನೇ ಉಪಾಸನಾರ್ಹವು. ಇದರಿಂದ ಭೇದರಹಿತವಾದ ಬ್ರಹ್ಮೈಕ್ಯತ್ವವು ಮುಕ್ತಜೀವರಿಗೆ ಉಂಟಾಗುವುದಿಲ್ಲವೆಂಬುವುದು ಸ್ಪಷ್ಟಪಡಿಸಿರುವುದು. "ಬ್ರಹ್ಮ ಇವ ಭವತಿ" ಎಂದು ಬ್ರಹ್ಮಸಮಾನನಾಗುವನು ಎಂಬ ಬ್ರಹ್ಮಸಾಮ್ಯತ್ವವು ಯಾತರಲ್ಲಿ ಎಂಬ ಪ್ರಶ್ನೆಗೆ ಅದೇ ಬ್ರಹ್ಮ ಸೂತ್ರದಲ್ಲಿ "ಭೋಗಮಾತ್ರ ಸಾಮ್ಯ ಲಿಂಗಾಚ" (ಶಾ. ಮಿ. 4–4–21) ಎಂಬ ಸೂತ್ರದಲ್ಲಿ ಪರಮಾತ್ಮನ ಆನಂದಾನುಭವದಲ್ಲೂ ಕಲ್ಯಾಣ ಗುಣಗಳಲ್ಲೂ ಮುಕ್ತಜೀವನಿಗೆ ಸಾಮ್ಯವುಂಟಾಗಿ ಶಾಶ್ವತಾನಂದವನ್ನು ಅನುಭವಿಸುತ್ತಿರುವನು ಎಂದು ಸ್ಪಷ್ಟವಾಗಿ ಹೇಳಿರುವುದು. ಭಗವದ್ಗೀತೆಯಲ್ಲೂ "ಮಮಸಾಧರ್ಮ್ಯಮಾಗತಃ" ಎಂದು ಮುಕ್ತನು ತನಗೆ ಸಮಾನವಾದ ಧರ್ಮಗಳನ್ನುಳ್ಳವನಾಗುವನು ಎಂದು ಶ್ರೀಕೃಷ್ಣನು ಹೇಳಿರುವನು.

ಜ್ಞಾನಿಯಾದವನು ಸಮಸ್ತ ಚರಾಚರಗಳಲ್ಲೂ ತದಂತರ್ಯಾಮಿಯಾದ ಪರಬ್ರಹ್ಮನನ್ನು ಕಾಣುವನು. ಅವನಿಗೆ ಎಲ್ಲವೂ ಬ್ರಹ್ಮಮಯವಾಗಿಯೇ ತೋರುವುದು. ಈ ಅಭಿಪ್ರಾಯವನ್ನು ಗೀತಾಶಾಸ್ತ್ರದಲ್ಲಿ ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಬ್ರಹ್ಮಾಗ್ನೌ ಬ್ರಹ್ಮಣಾಹುತಂ। ಬ್ರಹ್ಮೈವ ತೇನಗಂತವ್ಯಂ ಬ್ರಹ್ಮಕರ್ಮ ಸಮಾಧಿನಾ ॥ (4–24) ಎಂದರೆ ಬ್ರಹ್ಮಜ್ಞಾನಿಯಾದವನು ಮಾಡುವ ಯಜ್ಞದಲ್ಲಿ ಅದರಲ್ಲಿ ಉಪಯೋಗಿಸುವ ಸ್ರಕ್ಕು (ಎಂದರೆ ಸೌಟು) ಬ್ರಹ್ಮ, ಹವಿಸ್ಸು ಬ್ರಹ್ಮ, ಕರ್ತಾ ಬ್ರಹ್ಮ, ಅಗ್ನಿಯೂ ಬ್ರಹ್ಮ, ಯಜ್ಞಕರ್ಮವೂ ಬ್ರಹ್ಮ —ಹೀಗೆ ಎಲ್ಲವೂ ಬ್ರಹ್ಮಾತ್ಮಕವೆಂಬ ಭಾವದಿಂದ ಮಾಡುವ ಯಜ್ಞದಿಂದ ಬ್ರಹ್ಮಸ್ವರೂಪವಾದ ಆತ್ಮವನ್ನು ಹೊಂದುವನು ಎಂಬ ಶ್ಲೋಕದಿಂದ ವಿಶದವಾಗುವುದು.

ಪ್ರಪಂಚ ಸೃಷ್ಟಿಯ ವಿಷಯವನ್ನು ಮುಂದುವರಿಸಿ "ಅನೇನಜೀವೇನಾತ್ಮನಾನುಪ್ರವಿಶ್ಯನಾಮ ರೂಪೇವ್ಯಾಕರವಾಣಿ" (ಛಾಂ 6–3–2) ಎಂದು ಸಮಸ್ತ ಜೀವರುಗಳಲ್ಲೂ ಆತ್ಮಾವಾಗಿ ಪ್ರವೇಶಿಸಿ, ಎಂದರೆ ಜೀವಾತ್ಮರನ್ನು ತನ್ನ ಶರೀರವಾಗಿ ಮಾಡಿಕೊಂಡು ಎಂದು ಅರ್ಥವಾಗುವುದು. ಇಲ್ಲಿ ಜೀವರುಗಳಲ್ಲಿ ಎಂಬ ಪದವು ಸ್ಥೂಲಶರೀರದೊಳಗಿರುವ ಜೀವಾತ್ಮರನ್ನು ಹೇಳುವುದು; ಅವರ ಸ್ಥೂಲಶರೀರವನ್ನಲ್ಲ. ಹಿಂದೆ ಬೃಹದಾರಣ್ಯಕೋಪನಿಷದ್ವಾಕ್ಯದಲ್ಲಿ ಸೂಚಿಸಿದಂತೆ ಅಚಿತ್ತಾದ ಶರೀರಗಳಿಗೂ ಪರಮಾತ್ಮನೇ ಅಂತರ್ಯಾಮಿಯಾದ ಆತ್ಮವು. "ನಾಮರೂಪೇ" ಎಂಬ ಪದವು ಈ ಸ್ಥೂಲಶರೀರಗಳಿಗೆ ಅನ್ವಯಿಸುವುದು. "ಇಂದ್ರಿಯಾಣಿ ಮನೋಬುದ್ಧಿ ಸತ್ವಂ ತೇಜೋಬಲಂ ಧೃತಿಃ ವಾಸುದೇವಾತ್ಮಕನ್ಯಾಹುಃ ಕ್ಷೇತ್ರಂ ಕ್ಷೇತ್ರಜ್ಞ ಏವಚ" (ವಿ.ಸ)—ಎಂಬ ವಾಕ್ಯರೀತ್ಯಾ ಅಚಿತ್ತಾದ ಶರೀರ ಮತ್ತು ಇಂದ್ರಿಯಗಳೊಂದೊಂದೂ ಪರಮಾತ್ಮನ ಶರೀರಗಳು ಎಂದು ಹೇಳಿರುವುದು. ಪರಮಾತ್ಮನು ಚಿತ್ತು ಎಂದರೆ ಆತ್ಮರುಗಳು, ಅಚಿತ್ತು ಎಂದರೆ ಪ್ರಾಕೃತ ವಸ್ತುಗಳು. ಇವೆರಡನ್ನೂ ತನ್ನ ಶರೀರವನ್ನಾಗಿ ಮಾಡಿಕೊಂಡು ಸ್ಥೂಲ ಪ್ರಪಂಚವಾಗಿ ಆಗುವನು, ಎಂಬುವುದು ಸೃಷ್ಟಿಯ ಅರ್ಥ. ಅಚಿತ್ತಾದ ಪ್ರಕೃತಿಯು ಸೃಷ್ಟಿಕಾಲದಲ್ಲಿ ಸ್ಥೂಲರೂಪದಿಂದ ಗೋಚರಿಸುತ್ತಿದ್ದು ಪ್ರಳಯಕಾಲದಲ್ಲಿ ಸೂಕ್ಷ್ಮರೂಪದಿಂದ ಬ್ರಹ್ಮನಲ್ಲಿ ಲೀನವಾಗಿರುವುದು ಎಂದು ಹಿಂದೆಯೇ ಹೇಳಿದೆವು. ಇದರಿಂದ ಶಾಶ್ವತ ವಸ್ತುಗಳಾದ ಚಿತ್ತು ಅಚಿತ್ತುಗಳೆರಡೂ ಸೃಷ್ಟಿ ಪ್ರಳಯಗಳೆರಡಲ್ಲೂ ಪರಮಾತ್ಮನಿಗೆ ಶರೀರವಾಗಿದ್ದು ಅವನಿಗೆ ವಿಶೇಷಣಗಳಾಗಿರುವುವು. ನಮ್ಮ ಶರೀರದಲ್ಲಿ ಉಂಟಾಗುವ ಬಾಲ್ಯಯೌವನಾದಿ ವಿಕಾರಗಳು ಒಳಗಿರುವ ಜೀವಾತ್ಮನನ್ನು ಹೇಗೆ ಸ್ಪರ್ಶಿಸುವುದಿಲ್ಲವೋ ಅದೇರೀತಿಯಲ್ಲಿ ಪ್ರಕೃತಿಯಲ್ಲಿ ಕಾಣುವ ವಿಕಾರ, ಹೇಯತ್ವಾದಿದೋಷಗಳೂ ಪರಮಾತ್ಮನ ಶರೀರಕ್ಕೇ ವಿನಾ ತದಂತರ್ಯಾಮಿಯಾದ ಅವನಿಗೆ ತಗಲುವುದಿಲ್ಲ. ಪರಮಾತ್ಮನ ಶರೀರಗಳಾದ ಜೀವಾತ್ಮರುಗಳೂ ಕೂಡ ಸಂಸಾರ ದೆಸೆಯಲ್ಲಿ ಅಜ್ಞಾನಾದಿ ದೋಷಗಳಿಂದ ಕೂಡಿರುವರು. ಅವುಗಳಿಗೆ ಆತ್ಮವಾದ ಪರಮಾತ್ಮನಿಗೆ ಆ ದೋಷಗಳು ತಗಲುವುದಿಲ್ಲ. ಆದರಿಂದ ಸೃಷ್ಟಿಯೆಂದರೆ ಸ್ಥೂಲ ಚಿದಚಿತ್ತುಗಳನ್ನು ಶರೀರವಾಗಿ ಉಳ್ಳ ಪರಮಾತ್ಮ; ಪ್ರಳಯವೆಂದರೆ ಸೂಕ್ಷ್ಮ ಚಿದಚಿತ್ತುಗಳನ್ನು ಶರೀರವಾಗಿ ಉಳ್ಳ ಪರಮಾತ್ಮ ಎಂದು ಅರ್ಥ. ಈ ಎರಡು ದೆಸೆಗಳಲ್ಲೂ ಅಂತರಾತ್ಮಾವಾದ ಪರಮಾತ್ಮನು ತನ್ನ ಸಮಸ್ತ ಕಲ್ಯಾಣ ಗುಣಗಳೊಡನೆ ವಿಕಾರ ರಹಿತನಾಗಿ ಪ್ರಕಾಶಮಾನನಾಗಿಯೇ ಇರುವನು. ಹೀಗೆ ವೇದಾಂತಪ್ರಮಾಣಗಳಿಂದ ಸಿದ್ಧವಾಗುವಾಗ ಹಿಂದೆ ಹೇಳಿದಂತೆ ಪರಮಾತ್ಮನೇ ಜಗತ್ತಾಗಿ ಪರಿಣಮಿಸುವನು ಎಂದು ಹೇಳಿದ್ದರಲ್ಲಿ ಪರಮಾತ್ಮನಿಗೆ ಉಂಟಾಗುವ ದೋಷಗಳಾಗಲಿ ; ಪರಮಾತ್ಮನೇ ಮಾಯೆಯಿಂದ ಆವೃತನಾಗುವನು ಎಂದು ಹೇಳಿದ್ದರಲ್ಲಿ ಕಂಡುಬರುವ ಪ್ರಮಾಣ ದೋಷಗಳಾಗಲಿ ಯಾವುವೂ ಇರುವುದಿಲ್ಲ. ಶ್ರುತಿ ಪ್ರಮಾಣಗಳೂ ಯಾವ ವಿರೋಧಭಾವನೆಗಳಿಗೂ ಅವಕಾಶವೀಯದಂತೆ ಸಂಪೂರ್ಣವಾಗಿ ಸಮನ್ವಯಿಸುವುವು. ಆದರಿಂದ ಪರಬ್ರಹ್ಮನೆಂದರೆ ಚಿದಚಿಚ್ಛರೀರಿಯಾಗಿ ತದಂತರಾತ್ಮನಾದ ಪರಮಾತ್ಮನೆಂಬುವುದೇ ಶ್ರುತಿಸಿದ್ಧವು. ಹೀಗೆ ಅರ್ಥಮಾಡಿದಾಗಲೇ ಸರ್ವಶ್ರುತಿ ಸಾಮಂಜಸ್ಯವೇರ್ಪಡುವುದು, ಎಂಬುವುದು ಮೂರನೇ ಪಂಗಡದವರ ಸಿದ್ಧಾಂತ.

ಪರಬ್ರಹ್ಮನು ಪ್ರಪಂಚಕ್ಕೆ ಉಪಾದಾನ ಮತ್ತು ನಿಮಿತ್ತ ಕಾರಣನು :—

ಒಬ್ಬ ಕುಂಬಾರನು ಮಡಕೆಯನ್ನು ಮಾಡುವ ಕಾರ್ಯವನ್ನು ಉದಾಹರಣೆಯಾಗಿ ತೆಗೆದುಕೊಂಡು ಶ್ರುತಿಗಳಲ್ಲಿ ಇದನ್ನು ವಿಮರ್ಶಿಸಿರುವರು. ಮಡಕೆ ಇತ್ಯಾದಿ ಮಣ್ಣಿನ ಸಾಮಾನುಗಳನ್ನು ಮಾಡುವುದಕ್ಕೆ ಮೊದಲು ಮಣ್ಣು

ಅವಶ್ಯಕ. ಇದನ್ನು ಉಪಾದಾನ (ಗಚ್ಛಾ) ವಸ್ತುವೆನ್ನುವರು. ಕುಂಬಾರನು ನಿಮಿತ್ತಕಾರಣನು (Maker) ಆ ಕಾರ್ಯದಲ್ಲಿ ಉಪಯೋಗಿಸುವ ಚಕ್ರ, ಕೋಲು ಇತ್ಯಾದಿಗಳು ಸಹಕಾರಿ (ಸಲಕರಣೆ) ಕಾರಣಗಳು. ಈ ಮೂರೂ ಸೇರಿ ಮಡಕೆ ಮುಂತಾದ ಮಣ್ಣಿನ ಸಾಮಾನು ಗಳಾಗುವುವು. ಹೀಗೆಯೇ ಮರದ ಸಾಮಾನು ಗಳಿಗೆ ಮರ ಉಪಾದಾನ ಕಾರಣ; ಚಿನ್ನದ ಸಾಮಾನುಗಳಿಗೆ ಚಿನ್ನ ಉಪಾದಾನ ಕಾರಣ. ಹೀಗೆ ಮೂರು ಕಾರಣಗಳೂ ಸೇರಬೇಕು. ಪ್ರಾಪಂಚಿಕ ವ್ಯವಹಾರಗಳಲ್ಲಿ ಈ ಮೂರು ಕಾರಣಗಳೂ ಬೇರೆ ಬೇರೆಯಾಗಿರುವುವು; ಒಂದೇ ಅಲ್ಲ.

ಆದರೆ ಪ್ರಪಂಚ ಸೃಷ್ಟಿಯಲ್ಲಿ ಉಪಾದಾನ ಕಾರಣವಾದ ಚಿದಚಿತ್ತುಗಳು ಪರಮಾತ್ಮನೇ (ಎಂದರೆ ಅವನ ಶರೀರವೇ) ಆಗುವುದರಿಂದ ಅವನೇ ಉಪಾದಾನಕಾರಣನಾಗುವನು. ಪರಮಾತ್ಮನ ಸಂಕಲ್ಪವೇ ನಿಮಿತ್ತ ಮತ್ತು ಸಹಕಾರಿ ಕಾರಣಗಳಾಗುವುದರಿಂದ ಪ್ರಪಂಚ ಸೃಷ್ಟಿಯಲ್ಲಿ ಪರಮಾತ್ಮನೇ ಸರ್ವಕಾರಣನು ಎಂದು ಸಿದ್ಧಿಸುವುದು. ಇದನ್ನು ಗ್ರಹಿಸುವುದಕ್ಕೆ ಶ್ರುತಿಯು ಜೇಡರ ಹುಳುವನ್ನು (ಊರ್ಣನಾಭಿ, spider) ಉದಾಹರಿಸಿರುವುದು. ಆ ಹುಳುವು ತನ್ನ ಮನೆ ಯನ್ನು ತನ್ನ ಇಷ್ಟಪ್ರಕಾರ ತನ್ನ ಹೊಟ್ಟೆಯೊಳ ಗಿರುವ ವಸ್ತುವಿನಿಂದಲೇ ಕಟ್ಟಿಕೊಳ್ಳುವುದು.

ಪರಮಾತ್ಮನ ಸ್ವರೂಪ ರೂಪಗುಣ ವೈಭವಾದಿ ಗಳು ಅನಂತವಾಗಿರುವುವು. ಮುಂದಿ ಸಂದರ್ಭಾನುಸಾರವಾಗಿ ಇತರ ವಿಷಯಗಳನ್ನು ಚರ್ಚಿಸುವಾಗ ಅವುಗಳಲ್ಲಿ ಕೆಲವು ನಮ್ಮ ಗಮನಕ್ಕೆ ಬರುವುವು. ಜೀವರುಗಳ ಸಂಸಾರ, ಮೋಕ್ಷ ಇತ್ಯಾದಿಗಳನ್ನು ಅರಿಯುವುದಕ್ಕೆ ಪ್ರಪಂಚ ಸೃಷ್ಟಿಯ ವಿಚಾರವು ಸ್ವಲ್ಪಮಟ್ಟಿಗೆ ತಿಳಿಯುವುದು ಅವಶ್ಯಕವಾದ್ದರಿಂದ ಮುಂದೆ ಆ ವಿಷಯವು ಸಂಗ್ರಹವಾಗಿ ವಿವರಿಸಲ್ಪಡುವುದು ❖

(ಸಶೇಷ)

---

# ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು. —ತಿ. ತಿ. ದೇ.

---

# ಶ್ರೀ ಕೋದಂಡರಾಮಸ್ವಾಮಿ ದೇವಾಲಯ

## ತಿರುಪತಿ

### ಆರ್ಜಿತ ಕಲ್ಯಾಣೋತ್ಸವ

ತಿರುಪತಿಯ ಶ್ರೀ ಕೋದಂಡರಾಮಸ್ವಾಮಿ ದೇವಾಲಯದಲ್ಲಿ ಸ್ವಾಮಿಯ ಕಲ್ಯಾಣೋತ್ಸವವನ್ನು ಆರ್ಜಿತ ಸೇವೆಯನ್ನಾಗಿ ಪ್ರವೇಶಗೊಳಿಸಲಾಗಿದೆ. ಭಕ್ತಾದಿಗಳು ಆರ್ಜಿತ ಕಲ್ಯಾಣೋತ್ಸವ ಶುಲ್ಕ ರೂ 200-00 ಅನ್ನು ಸಲ್ಲಿಸಿ ಈ ಸೇವೆಯಲ್ಲಿ ಭಾಗ ವಹಿಸಬಹುದು.

ವಿಜಯ ನಗರದರಸರ ಕಾಲದಲ್ಲಿ ಜೀರ್ಣೋದ್ಧಾರವಾಗಿರುವ ಈ ಪವಿತ್ರ ದೇವಾಲಯವು ತಿರುಪತಿ ನಗರದ ಮಧ್ಯೆ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಹತ್ತಿರ ಅಲಿಪಿರಿಗೆ ಹೋಗುವ ಹಾದಿಯಲ್ಲಿ 2 ಫರ್ಲಾಂಗ್ ದೂರದಲ್ಲಿದೆ. ಆಕರ್ಷಕ ವಾದ ಪ್ರಶಾಂತವಾದ ಸ್ಥಳ.

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕಾಗಿ ವಿನಂತಿ.

ತಿ.ತಿ.ದೇ.

---

(20 ನೇ ಪುಟದಿಂದ)

ಇವುಗಳ ಜೊತೆಗೆ ತೀರ್ಥಯಾತ್ರೆ ಸತ್ಪಾತ್ರರಿಗೆ ದಾನ ಇತ್ಯಾದಿ ಪುಣ್ಯ ಕಾರ್ಯಗಳನ್ನು ಮಾಡಿದಲ್ಲಿ ಅಪರಾಧ ಹೇತುಗಳಾದ ಅರಿಷಡ್ವರ್ಗಗಳು ತೊಲಗಿ ಪಾಪಗಳು ನಶಿಸಿ ಹೋಗುವುವು. ಇದರಿಂದ ಭಗವಂತನು ಸುಪ್ರೀತನಾಗುವನು ಮತ್ತು ಅವನ ಪ್ರಸಾದವ ಉದಯಿಸುವುದು ಯಮ ಬಾಧೆಗೆ ನಾವು ಹೇಗೆ ಭಯಪಡುತ್ತೇವೆಯೋ ಹಾಗಿಯೇ ಭಾಗವತಾಪಚಾರ ಎಲ್ಲಿ ಸಂಭವಿಸುವುದೋ ಮತ್ತು ಅದರಿಂದ ಎಲ್ಲಿ ಶಿಕ್ಷೆಯಾಗುವುದೊ ಎಂಬ ಭಯ ನಮ್ಮಲ್ಲಿರಬೇಕು. ಇದನ್ನೇ ವೇದಾಂತದೇಶಿಕರು 'ಮೃತ್ಯುವಿನ್ ಕಡೈವಾಯಿಲೆ ಅಗಪಟ್ಟಾರ್ ಪೋಲೆ ನಡುಂಗ' ಎಂದು ರಹಸ್ಯತ್ರಯ ಸಾರಗ್ರಂಥದಲ್ಲಿಯೂ ಮತ್ತು 'ತಸ್ಯಬ್ರಹ್ಮವಿದಾಗಸಃ' ಎಂದು ಸಂಕಲ್ಪಸೂರ್ಯೋದಯದಲ್ಲಿಯೂ ವಿವರಿಸಿದ್ದಾರೆ. ಆದ್ದರಿಂದ ಭಗವತ್ಸೇವೆಯಲ್ಲಿ ಪ್ರೀತಿಯೂ ಭಾಗವತಾಪಚಾರಗಳಲ್ಲಿ ಭೀತಿಯೂ ನಮ್ಮಲ್ಲಿರಬೇಕು. ಭಗವದಾಜ್ಞೆಗೆ ವಿರುದ್ಧವಾಗಿ ಯಾವುದನ್ನೂ ಮಾಡಬಾರದು. ಲೌಕಿಕ ಪ್ರಪಂಚದಲ್ಲಿ ಅಪಚಾರಗಳನ್ನು ತಡೆಗಟ್ಟಲು ಸಾಮಾನ್ಯಜನರು ಸಹಕರಿಸಬೇಕು 'ಮೌನ! ಎಂಬ ಭಾಷೆ ಮತ್ತು ನೀತಿಯನ್ನೇ ಅನುಸರಿಸಬೇಕು. ಕೈಲಾದಷ್ಟು ಭಗವತ್ಸೇವೆ ಮತ್ತು ಹೆಚ್ಚಾಗಿ ಭಾಗವತ ಕೈಂಕರ್ಯಗಳನ್ನು ಮಾಡಿ ಸನ್ಮಾರ್ಗದಲ್ಲಿ ನಡೆಯುವುದೇ ಪುರುಷಾರ್ಥ. ಈ ಸಕ್ರಿಯೆ ಕುಲಶೇಖರಪಡಿಯನ್ನೇ ಜ್ಞಾಪಕಕ್ಕೆ ತರುವುದು ('ಪಡಿಯಾಯ್ ಕಿಡಂದು ಉನ್ ಪವಳವಾಯ್ ಕಾಣ್ಬೇನೆ') (ಪೆರು ತಿರುಮಾಳ್‌ಮೊಳಿ 4-9) ಭಾಗವತರ ಪಾದಸಂಪರ್ಕ ಮತ್ತು ಭಗವದ್ದರ್ಶನವು ಸದಾಕಾಲ ಪ್ರಾಪ್ತವಾಗುವ ಜನ್ಮ ತಮಗೆ ಬೇಕೆಂದು ಕುಲಶೇಖರಾಳ್ವಾರರು ದೇವರಲ್ಲಿ ಮೊರೆಯಿಡುವರು. ಭಗವತ್ಸೇವೆ, ಭಾಗವತಸೇವೆ–ಈ ಎರಡು ಬಿಡದೆ ಮಾಡುವುದಕ್ಕೆ ಇದು ಒಂದು ಶ್ರೇಷ್ಠವಾದ ಉದಾಹರಣೆಯಾಗಿದೆ.

★

(14ನೇ ಪುಟದಿಂದ)

ರಾಮು,ಅಂಬೆಯನ್ನು ಲಗ್ನ ವಾಗುವಂತೆ ಬಲವಂತ ಮಾಡಿದ. ಯಾವುದಕ್ಕೂ ಮಣಿಯದ ದೇವವ್ರತನ ವೀರವ್ರತ ನಭೂತೋನ ಭವಿಷ್ಯತಿ.

ರಾಜಸೂಯ ಯಜ್ಞದ ಅಗ್ರಪೂಜಾ ಸಂದರ್ಭದಲ್ಲಿ ಭೀಷ್ಮ ಸಭೆಗೆ ಶ್ರುತಪಡಿಸಿದ ಕೃಷ್ಣ ಮಹಿಮೆಯಂತೂ ಮಂದಾಕಿನೀ ಸದೃಶ ನಿರ್ಮಲ ಭಕ್ತಿ ರಸಧಾರೆಯಂತಿದೆ. ಕೃಷ್ಣ ಸಂಧಾನವೇ ಮುಂತಾದ ಹಲವಾರು ಸನ್ನಿವೇಶಗಳಲ್ಲಿ ಕೌರವ ಚಕ್ರವರ್ತಿಗೆ, ಗಾಂಗೇಯ ನೀಡಿದ ಬುದ್ಧಿವಾದ, ಆತನ ನ್ಯಾಯನಿಷ್ಠೆಗೂ, ಧರ್ಮೈಕ ದೃಷ್ಟಿಗೂ ನಿದರ್ಶನವಾಗಿದೆ-ಭೀಷ್ಮನ ಅಪಾರ ಶಾಸ್ತ್ರ ಪಾಂಡಿತ್ಯಕ್ಕು, ಅಗಾಧ ಲೋಕಾನುಭವಕ್ಕೂ ಸಾಕ್ಷಿಯಂತಿರುವ ಶಾಂತಿ ಪರ್ವ, ಅನುಶಾಸನ ಪರ್ವಗಳು, ಜಗತ್ತಿನ ಸಮುಜ್ವಲ ಸಾಹಿತ್ಯವಾಗಿವೆ. ಯಾವುದೇ ದೃಷ್ಟಿಯಿಂದ ನೋಡಿದರೂ ಆತನ ವ್ಯಕ್ತಿತ್ವ ಅತ್ಯುನ್ನತ. ಆದ್ದರಿಂದಲೇ ಕನ್ನಡದ ಆದಿಕವಿ ಪಂಪ- 'ಅತ್ಯುನ್ನತಿಯೊಳ್ ಅಮರ ಸಿಂಧೂದ್ಭವಂ' ಎಂದು ಕೊಂಡಾಡಿದ್ದು.

ಇನ್ನು ಹನುಮಂತ ಶ್ರೀಮದ್ರಾಮಾಯಣದಲ್ಲಿ ಈತನನ್ನು-

ಜ್ಞಾನಿನಾಂ ಅಗ್ರಗಣ್ಯಃ
ಬುದ್ಧಿಮತಾಂ ವರಿಷ್ಠಃ
ವಾಕ್ಯಜ್ಞೋ ವಾಕ್ಯಕುಶಲಃ
ನಯಜ್ಞನಯ ಪಂಡಿತಃ
ಸೀತಾವೃತ್ತಾಂತ ಕೋವಿದಃ.........

ಇತ್ಯಾದಿ ಮಾತುಗಳಿಂದ ಆದಿಕವಿ ವಾಲ್ಮೀಕಿ ಕೊಂಡಾಡಿದ್ದಾನೆ. ಯಾವ ಕವಿಯ ಯಾವ ಮಹೋನ್ನತ ಉಪಮಾನವೂ ಹನುಮಂತನ ಭವ್ಯವ್ಯಕ್ತಿತ್ವಕ್ಕೆ ಸಾಲದೇ ಹೋಗುತ್ತವೆ. ಆತನು ವಸ್ತುತಃ ಉಪಮಾತೀತವ್ಯಕ್ತಿ.

ಭವಿಷ್ಯದ್ವಿಧಾತನೆಂದು ಕೀರ್ತಿತನಾಗಿರುವ ಆಂಜನೇಯ, ತನ್ನ ಸದ್ಗುಣ ಸಂಪತ್ತಿನಿಂದಾಗಿ-ಕಾಂಚನಾದ್ರಿ ಕಮನೀಯ ವಿಗ್ರಹನಾಗಿ ಭಾರತೀಯರ ಮನೋಮಂದಿರದಲ್ಲಿ ಸುಪ್ರತಿಷ್ಠಿತನಾದ. ಸ್ವಚ್ಛಂದತಶ್ಚ ಮರಣಂ ತವಸ್ಯಾತ್-ಎಂದು ಜಾಂಬವಂತ ಹೇಳಿರುವ ಮಾತು ಗಮನಿಸಿದಾಗ, ಭೀಷ್ಮರಂತೆ, ಆಂಜನೇಯನೂ ಇಚ್ಛಾಮರಣದ ವರಪಡೆದಿದ್ದನೆಂದು ಅರ್ಥವಾಗುತ್ತದೆ. ಮಾರುತಿಗೆ ವರ ನೀಡಿದ ದೇವತೆ ಇಲ್ಲ!! ಈತನಿಗೆ ವರದಾನ ಮಾಡಿ ಬಹುಶಃ ಅವರು ಧನ್ಯರಾಗಿರಬೇಕು!! ಮಾರುತಿಯ ವಚೋವೈಖರಿಗೆ ಬೆರಗಾದ ಶ್ರೀರಾಮ ಉಚ್ಚಾರಯತಿ ಕಲ್ಯಾಣೀಂ ವಾಚಾಂ ಹೃದಯ ಹಾರಿಣೀಮ್-ಎಂದ. ಹನುಮಂತ ತನ್ನ ರಮಣೀಯ ವಚೋವೈಖರಿಯಿಂದ ರಾಮನ ಹೃದಯವನ್ನೇ ಸೂರೆಗೊಂಡನಂತೆ!! ಕೋಟಿ ಕೋಟಿವಾನರ ಸೈನ್ಯದಲ್ಲಿ ಶ್ರೀರಾಮಚಂದ್ರನ ಮುದ್ರೆಯುಂಗರವನ್ನು ಪಡೆಯುವ ಭಾಗ್ಯ ಆಂಜನೇಯನಿಗೊದಗಿತು. ಸಾಗರೋಲ್ಲಂಘನ, ಸೀತಾನ್ವೇಷಣ-ಲಂಕಾದಹನ, ಅಶೋಕವನ ವಿಧ್ವಸನ...... ಇತ್ಯಾದಿ ಅದ್ಭುತ ಕಾರ್ಯಗಳನ್ನೆಲ್ಲ ಗಮನಿಸಿ ಪ್ರಭುರಾಮಚಂದ್ರ, ಮಾರುತಿಯಬಗ್ಗೆ ಬಹುದೊಡ್ಡ ಮಾತಾಡಿದ್ದಾನೆ.

ಕೃತಂ ಹನುಮತಾ ಕಾರ್ಯಂ
ಸುಮಹದ್ ಭುವಿದುರ್ಲಭಂ
ಮನಸಾಪಿ ಯದನ್ಯೇನ ನ
ಶಕ್ಯಂ ಧರಣೀತಲೇ ||

ಜಗತ್ತಿನ ಇನ್ನಾವ ಜೀವಿಯೂ-ಕಲ್ಪನೆ ಸಹ ಮಾಡಿಕೊಳ್ಳಲಾಗದ ಪರಮಾದ್ಭುತ. ಕಾರ್ಯಗಳನ್ನು ಮಾರುತಿ, ಲೀಲಾಜಾಲವಾಗಿ ಮಾಡಿದ್ದಾನೆ. ಅದರೂ ಸಹ-ಸುಗ್ರೀವನ ಸೈನ್ಯದಲ್ಲಿ ತನಗಿಂತ ಕಿರಿಯರಿನ್ನಾರೂ ಇಲ್ಲವೆಂದು ಸೀತಾದೇವಿಯ ಹತ್ತಿರ ಮಾತಾಡುವ ವಿನಯಮೂರ್ತಿ ಆಂಜನೇಯ, ಸೌಜನ್ಯ ವಿಗ್ರಹದಂತೆ ಕಾಣುತ್ತಾನೆ, -ಮತ್ತಃ ಪ್ರತ್ಯವರಃ ಕಶ್ಚಿನ್ನಾಸ್ತಿ ಸುಗ್ರೀವ ಸನ್ನಿಧೌ- ಎಂದು ಕೈ ಮುಗಿದು ಮಾತಾಡಿದ ಮಾರುತಿಯನ್ನು ಸೀತೆ ಕೃಪಾದೃಷ್ಟಿಯಿಂದ ಹರಸದಿರಲು ಸಾಧ್ಯವೇ?

ಆಶ್ರಯ ಬೇಡಿ ಬಂದ ವಿಭೀಷಣನನ್ನು ತನ್ನ ಗುಂಪಿಗೆ ಸೇರಿಸಿ ಕೊಳ್ಳುವುದೆ- ಬೇಡವೇ?-ಎಂಬ ವಿಚಾರದಲ್ಲಿ ವಾನರ ಸೈನ್ಯದಲ್ಲಿ ತೀವ್ರವಾದ ಚರ್ಚೆಗಳಾಗಿ ಭಿನ್ನಾಭಿ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಹಿಂದೇಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಪ್ರಾಯ ಬಂತೇ ಹೊರತು ಏಕಾಭಿಪ್ರಾಯ ಬರಲಿಲ್ಲ. ಕಾಲದೇಶಗಳ ಔಚಿತ್ಯವರಿಯದೆ ಬಂದಿರುವ ವಿಭೀಷಣ–ರಾವಣನ ಸೋದರ ನಾದ್ದರಿಂದ – ಸ್ವಾಗತಾರ್ಹನಲ್ಲವೆಂದು ಸ್ವಯಂ ಸುಗ್ರೀವನೇ ವಿರೋಧ ವ್ಯಕ್ತಪಡಿಸಿದ. ಅಂಗದ, ನಳ, ನೀಲ, ಜಾಂಬವಾದಿಗಳು ತಂತಮ್ಮ ಅಭಿಪ್ರಾಯ ಸೂಚಿಸಿದರು. ಯಾರು ವಿಭೀಷಣನ ಬಗ್ಗೆ ಸದಭಿಪ್ರಾಯ ಕೊಡಲಿಲ್ಲ. ಕೊನೆಯಲ್ಲಿ ಶ್ರೀರಾಮಚಂದ್ರ ಆಂಜನೇಯನನ್ನು ಕೇಳಿದ. ಆಗ ಆಂಜನೇಯನ ಮಾತಿನ ನಯಗಾರಿಕೆ ಪ್ರಶಂಸನೀಯವಾಗಿದೆ–

ಅಥ ಸಂಸ್ಕಾರ ಸಂಪನ್ನೋ
ಹನುಮಾನ್ ಸಚಿವೋತ್ತಮಃ
ಉವಾಚ ವಚನಂ ಶ್ಲಕ್ಷ್ಣಂ
ಅರ್ಥವನ್ಮಧುರಂ ಲಘು ॥

ನಯವಾಗಿ, ವಿನಯವಾಗಿ, ಅರ್ಥವತ್ತಾಗಿ ಮಧುರವಾದ ಧಾಟಿಯಲ್ಲಿ, ಸಂಕ್ಷೇಪವಾಗಿ, ತನ್ನ ಅಭಿಪ್ರಾಯ ಸೂಚಿಸಿದನಂತೆ ಸಂಸ್ಕಾರ ಸಂಪನ್ನನಾದ ಆಂಜನೇಯ!! ಯಾರೇನೇ ಹೇಳಿದರೂ ಅಂತಿಮತೀರ್ಮಾನ ಪ್ರಭುರಾಮ ಚಂದ್ರನದೇ–ಇದು ಆಂಜನೇಯನಿಗೆ ಸ್ಪಷ್ಟವಾಗಿ ಗೊತ್ತಿತ್ತು. ಈ ವಿಚಾರದಲ್ಲಿ ನಿನ್ನಭಿಪ್ರಾಯವೇನೆಂದು ರಾಮ ಕೇಳಿದ್ದೇ ಒಂದು ಗೌರವ ವೆಂದು ಭಾವಿಸಿದ ಮಾರುತಿ – ವಿಭೀಷಣ ಸ್ವಾಗತಾರ್ಹನೇ ಹೊರತು ತಿರಸ್ಕರಿಸ ಬೇಕಾದವನಲ್ಲ ವೆಂದು ನಾನಾರೀತಿಯಲ್ಲಿ ಪುಷ್ಟೀಕರಿಸಿ ಮಾತಾಡಿದ. ಹನುಮನ ಮತವೇ ಹನುಮನ ಮತ–ಎಂಬಂತೆ, ರಾಮಚಂದ್ರ ಪ್ರಭು, ವಿಭೀಷಣನನ್ನು ಗೌರವ ದಿಂದ ಕಂಡ–ಸ್ವಾಗತಿಸಿದ, ಪರಮಾಪ್ತನಾಗಿ ಸ್ವೀಕರಿಸಿದ. ವಿಭೀಷಣನನ್ನು ಕರೆತರುವಂತೆ ಸುಗ್ರೀವನಿಗೇ ಆಜ್ಞೆ ಮಾಡಿದ್ದು ತುಂಬ ಔಚಿತ್ಯ ಪೂರ್ಣವಾಗಿ ಕಾಣುತ್ತದೆ.

ನ ರಾವಣ ಸಹಸ್ರಂ ಮೇ ಯುದ್ಧೇ ಪ್ರತಿಬಲಂ ಭವೇತ್–ಎಂದು ರಾವಣನರಮನೆಯಲ್ಲೇ–ಅವನ ಆಸ್ಥಾನದಲ್ಲೇ – ಮುಖದ ಮೇಲೆ ಹೊಡೆದಂತೆ ಮಾತಾಡಿದ ವೀರಾಗ್ರಣಿ ಮಾರುತಿ,ತನ್ನ ಪರಿಚಯ ಹೇಳುವಾಗ ಮಾತ್ರ – ದಾಸೋಽಹಂ ಕೋಸಲೇಂದ್ರಸ್ಯ ಎನ್ನುತ್ತಾನೆ. ಇದು ಆತನ ವಿನಯಸಂಪನ್ನತೆಯನ್ನು ತಟಿಲ್ಲತೆಯಂತೆ ಬೆಳಗಿಸುವಮಾತು. ಆರ್ಜಿಸಿದ ತಪಶ್ಶಕ್ತಿಯನ್ನು, ಯೋಗಸಿದ್ಧಿಯನ್ನು ರಾಮನ ಕಾರ್ಯಕ್ಕೆ ವಿನಿಯೋಗ ಮಾಡಿದಲ್ಲದೆ, ಚರಿತಾರ್ಥನಾಗುವುದಿಲ್ಲವೆಂದು ಆಂಜನೇಯನ ಸುದೃಢ ನಂಬಿಕೆಯಾಗಿತ್ತು. ಆದ್ದರಿಂದ ತನ್ನನ್ನು ತಾನೇ ರಾಮಾರ್ಪಿತವಾಗಿ ಮಾಡಿ ಕೊಂಡ. ತನ್ಮೂಲಕ ಧನ್ಯನಾದ–ಮಾನ್ಯನಾದ. ಕರ್ತವ್ಯ ಪರಾಯಣತೆ–ಆಸ್ತಿಕಮನೋಭಾವ–ಧರ್ಮಶ್ರದ್ಧೆ – ವಿನಯ ಸಂಪನ್ನತೆ–ನಿರ್ಲಿಪ್ತ ಮನೋಭಾವ...... ಇವು ಮಾನವನನ್ನು ಯಾವ ಭವ್ಯತೆಗೇರಿಸುತ್ತವೆ–ಇದಕ್ಕೆ ಹನುಮ ಭೀಷ್ಮರಿಗಿಂತ ಬೇರೆ ಉದಾಹರಣೆ ಬೇಕಿಲ್ಲ.

ಭೀಷ್ಮನ ಸಲಹೆಯನ್ನು ಸುಯೋಧನ, ಹನುಮಂತನ ಸಲಹೆ ರಾವಣ ಕೇಳಿದ್ದಿದ್ದರೆ, ರಾಮಾಯಣ ಭಾರತಗಳ ರೂಪವೇ ಬೇರೆಯಾಗುತ್ತಿತ್ತು ಕೀರ್ತಿಸ್ತಂಭದ್ವಯಮಿವ –ಎಂಬ ಕಾಳಿದಾಸನ ಮಾತು ನೆನಪಿಗೆ ಬಂದಾಗ, ಭೀಷ್ಮ–ಹನುಮಂತರು ನೆನಪಾಗುತ್ತಾರೆ.

ಇವರಿಬ್ಬರೂ ಭಾರತೀಯ ಕೀರ್ತಿಸ್ತಂಭಗಳು, ಭಾರತೀಯ ಆಧ್ಯಾತ್ಮ ಜೀವನ ಕ್ರಮದ ಪವಿತ್ರ ಮೂರ್ತಿಗಳು. ಆ ಪುಣ್ಯ ಪುರುಷರ ಅನುಗ್ರಹ ಆಶೀರ್ವಾದಗಳು ಭಾರತೀಯರಿಗೆ ಸದಾ ಲಭ್ಯವಾಗಿರಲಿ ನಾವು ಅವರ ಆದರ್ಶವನ್ನು ಮರೆಯದಿರೋಣ. ಅದು ಬೇಡವೆನ್ನುವುದಾದರೆ ರಾವಣ ಸುಯೋಧನರಂತಹ ದುಷ್ಟ ಮೂರ್ಖ ಪರಂಪರೆ ಲೋಕದಲ್ಲಿ ಬೆಳೆದೀತು.

ರಾಮಾಯಣ ಭಾರತಗಳ ಸಮಗ್ರ ಸಂದೇಶದ ಮೂರ್ತಿ ಮಾನ್ ಸ್ವರೂಪಗಳಂತಿರುವ ಹನುಮ ಭೀಷ್ಮರು ಪ್ರಾತಃ ಸ್ಮರಣೀಯರಾದ ಪುಣ್ಯ ಜೀವಿಗಳು. ಅನುಕರಣೀಯರಾದ ಭವ್ಯಾತ್ಮರು.



(16 ನೇ ಪುಟದಿಂದ)

ವಾಂಛಿತಂ ಲಭತೇಭೀಷ್ಟಂ
ಷಣ್ಮಾಸಾನಂತರಂ ಖಲು ॥
ಪುತ್ರಾರ್ಥೀನ್ ಲಭತೇ ಪುತ್ರಂ
ಯಶೋರ್ಥೀನ್ ಲಭತೇ ಯಶಃ।
ವಿದ್ಯಾರ್ಥೀನ್ ಲಭತೇ ವಿದ್ಯಾಂ
ಧನಾರ್ಥೀನ್ ಲಭತೇ ಧನಂ ॥

ಬ್ರಾಹ್ಮಣೋತ್ತಮನು ಭಕ್ತಿ ಪುರಃಸರವಾಗಿ ಪ್ರತಿದಿನವೂ ಮೂರಾವೃತ್ತಿ ಈ ಸ್ತೋತ್ರವನ್ನು ಜಪಿಸಿದರೆ, ಆರು ತಿಂಗಳ ನಂತರ ಅಪೇಕ್ಷಿಸಿದ ಫಲವನ್ನು ಖಂಡಿತವಾಗಿಯೂ ಪಡೆಯುತ್ತಾನೆ. ಪುತ್ರಕಾಮಿಯು ಪುತ್ರನನ್ನೂ, ಕೀರ್ತಿಯನ್ನು ಬಯಸುವವನು ಕೀರ್ತಿಯನ್ನೂ, ವಿದ್ಯಾಕಾಂಕ್ಷಿಯು ವಿದ್ಯೆಯನ್ನೂ, ಧನಾಪೇಕ್ಷಿಯು ಧನವನ್ನೂ ಪಡೆಯುತ್ತಾನೆ.

ಸರ್ವಥಾ ಮಾಸ್ತು ಸಂದೇಹೋ
ಹರಿಃ ಸಾಕ್ಷಿ ಜಗತ್ಪತಿಃ।
ಯಃ ಕರೋತ್ಯತ್ರ ಸಂದೇಹಂ
ಸ ಯಾತಿ ನರಕಂ ಧ್ರುವಮ್ ॥

ಜಗದೀಶ್ವರನಾದ ಶ್ರೀಹರಿಯೇ ಇದಕ್ಕೆ ಸಾಕ್ಷಿಯಾಗಿದ್ದು, ಈ ವಿಷಯದಲ್ಲಿ ಸಂದೇಹ ಸಲ್ಲದು. ಹೀಗಿದ್ದೂ ಅನುಮಾನ ಪಟ್ಟವನು ಖಂಡಿತವಾಗಿಯೂ ನರಕಕ್ಕೇ ಹೋಗುತ್ತಾನೆ.

ಶ್ರೀವ್ಯಾಸರಾಯರು ಸ್ಥಾಪಿಸಿದ 732 ಪ್ರಾಣದೇವರ ವಿಗ್ರಹಗಳಲ್ಲಿ ಈ ಯಂತ್ರೋದ್ಧಾರಕ ಪ್ರಾಣದೇವರ ವಿಗ್ರಹವೇ ಮೊದಲನೆಯದೆಂದು ಹೇಳುತ್ತಾರೆ. ಅವರು ಈ ಯಂತ್ರದಲ್ಲಿ ಒಂದು ಕೋಟಿ ಮಂತ್ರಗಳ ಬೀಜಾಕ್ಷರಗಳನ್ನು ಅಡಗಿಸಿದರಂತೆ. ಅಲ್ಲದೇ ಮೂರು ಕೋಟಿ ಜಪಮಾಡಿ, ತಾವು ಪಡೆದ ಸಿದ್ಧಿಯನ್ನು ವಿಗ್ರಹಕ್ಕೆ ಧಾರೆ ಎರೆದರಂತೆ. ಈ ಮಾರುತಿ ವಿಗ್ರಹವು ವಿಜಯ ನಗರದ ಪತನಾನಂತರವೂ ಭಕ್ತಾದಿಗಳಿಂದ ಪೂಜೆಗೊಳ್ಳುತ್ತಿದ್ದು ಅವರ ಅಭೀಷ್ಟಗಳನ್ನು ಈಡೇರಿಸುತ್ತಾ ಬಂದಿದ್ದಾನೆ.

ಇಂಥ ದಿವ್ಯ ಮಂತ್ರವನ್ನು ಕೇವಲ ಭಕ್ತಜನರ ಉದ್ಧಾರಕ್ಕಾಗಿಯೇ ರಚಿಸಿ ಶ್ರೀ ಯಂತ್ರೋದ್ಧಾರಕ ಪ್ರಾಣದೇವರನ್ನು ಸ್ಥಾಪಿಸಿ ಮಹದುಪಕಾರ ಮಾಡಿದ್ದಾರೆ.

## ಬಲವಂತ-ಹನುಮಂತ



ಈತನೇ ಬಲವಂತ ಹನುಮಂತ
ವಾತಸುತ–ವೀರನೆಂದೆನಿಸಿದ ॥ಪ॥

ಅಂಜನೆಯ ಉದರದಿ ಜನಿಸಿ
ಕಂಜನಾಭನ ಅಂಘ್ರಿಯ ಭಜಿಸಿದ 1

ತರಣಿ ಕುಲ ತಿಲಕ ನಾಜ್ಞೆಯ ಪಡೆದು
ಧರಣಿ ಸುತೆಯೆಳ ಅರಸಲು ನಡೆದ 2

ಅಂಜದೇ ವಾರಿಧಿಯನು ದಾಟಿ
ಅಂಜಿಸಿ ರಾವಣ ಸೇನೆಯ ಮೆಟ್ಟಿದ 3

ಜಾನಕಿಗೆ ಉಂಗುರವನೆ ಕೊಟ್ಟು
ದಾನವನ ಪುರವನೆ ದಹಿಸಿದ 4

ಭರದಿ ಸಿಂಧೂ ಸೇತುವೆ ಕಟ್ಟಿ
ತ್ವರದಿ ರಿಪುಸೇನೆಯ ಸಂಹರಿಸಿದ 5

ಸೀತಾರಾಮರ ಸೇವೆಯ ಗೈದು
ಖ್ಯಾತಿಯ ಪಡೆದು ನಿಂತಿರುವ 6

ಅಜಪದವಿಯ ಶ್ರೀರಾಮಕೊಡುತಿರಲು
ನಿಜ ಭಕುತಿಯ ಬೇಡಿ ಪಡೆದಿರುವ 7

—ಶ್ರೀನಿವಾಸಮಠದ.

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳಿಸಿಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಎ. ಶಶಿಕಾಂತ್
1949, ಸಾಲಿಗಲ್ಲಿ
ಚಿಕ್ಕೋಡಿ–591201

ಎಸ್. ವಿ. ಶೆಟ್ಟಿಗಾರ್
ನ್ಯೂಸ್ ಏಜಂಟ್
ಸಿದ್ಧಿಕಟ್ಟೆ ಬಂಟ್ವಾಳ ತಾ॥
ದ. ಕನ್ನಡ

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕಬಳ್ಳಾಪುರ

ವೆಂಕಟೇಶ ಶಿವಾಜಿ ಘುಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಪಿ.ಎಸ್. ನಾಗರತ್ನಮ್ಮ
ಸಪ್ತಗಿರಿ ಏಜಂಟ್
837, ಪಿ.ಎಸ್.ಕೆ. ರಸ್ತೆ
ಬಂಗಾರಪೇಟೆ.

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳೆ ಬುರುಜು ಹಿಂಭಾಗದರಸ್ತೆ
ಬಿಜಾಪುರ.

ಜೆ.ಎಸ್. ರಾಮಮೂರ್ತಿ
C/O ಜಿ.ಎಸ್. ಪಾರ್ಥಸಾರಥಿ
ಕಠಾರಿ ಪಾಳ್ಯ, ಕೋಲಾರ

ಬಿ.ಎಸ್. ವೇಣುಗೋಪಾಲನ್,
ಕೆಸ್ತೂರು ಅಂಚೆ,
ತುಮಕೂರು ಜಿಲ್ಲೆ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟಾಂಡ್‌ರೋಡ್
ಗಂಗಾವತಿ.

ಎಸ್. ಜಯರಾಂ
731, 8 ಕ್ರಾಸ್ 2 ಮೇನ್
ಎಚ್. ಎ. ಎಲ್. 2 ಸ್ಟೇಜ್
ಬೆಂಗಳೂರು–38

ಬಿ. ಆರ್. ವೆಂಕಟೇಶ ಪ್ರಸಾದ್
929, (ಹೊಸ ನಂ–4) 3 ನೇ ಮುಖ್ಯರಸ್ತೆ
"C" E–B ಬ್ಲಾಕ್, 2 ಸ್ಟೇಜ್,
ರಾಜಾಜಿನಗರ, ಬೆಂಗಳೂರು–10.

ಬಿ. ನಾಗರಾಜ್
1418 ಕೆ. ಟಿ. ರಸ್ತೆ
ಕೋಟೆ, ಚೆನ್ನಪಟ್ಟಣ

ಶಂಕರಪ್ಪ
ಫೋಟೋಗ್ರಾಫರ್
6 ಕ್ರಾಸ್, ಕೆ. ಟಿ. ಜೆ. ನಗರ
ಉರ್ದುಶಾಲೆಯಬಳಿ
ದಾವಣಗೆರೆ

ಎಸ್. ಶ್ರೀನಿವಾಸ ತಂತ್ರಿ
ಶರಾವತಿ ಹೆಂಚಿನ ಕಾರ್ಖಾನೆ
ಮಾವಿನಕುರ್ವೆ
ಹೊನ್ನಾವರ ತಾಲ್ಲೂಕು

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ.**

ಗೃಹಲಕ್ಷ್ಮಿ

# ಭೀಮವ್ವ ಬರೆದ ಪತಿ ದಾನ ಕೊಟ್ಟ ಹಾಡು

ಎರಡನೆಯ ಹಂತದ ನಂತರ ಬಂದ ದಾಸ ಸಾಹಿತ್ಯ ಕರ್ತೃಗಳಲ್ಲಿ ಹರಪನಹಳ್ಳಿ ಭೀಮವ್ವನಿಗೆ ಗಮನಾರ್ಹ ಸ್ಥಾನವಿದೆ. ಈಕೆ ಸುಭದ್ರಾ ಕಲ್ಯಾಣ, ನಳಚರಿತ್ರೆ, ಪತಿದಾನಕೊಟ್ಟ ಹಾಡು, ಸುದಾಮ ಚರಿತ್ರೆ ಇತ್ಯಾದಿಯಾಗಿ 142 ಹಾಡುಗಳನ್ನು ರಚಿಸಿದ್ದಾಳೆ.

ಹರಿವಂಶ ಪುರಾಣದಲ್ಲಿ ಚಿಕ್ಕದಾಗಿ ಬರುವ ಕೃಷ್ಣದಾನವ್ರತದ ಕಥೆಯನ್ನು ಆಕರವಾಗಿ ಹೊಂದಿ, ಅದನ್ನೇ ದೀರ್ಘವಾಗಿ ರಚಿಸಿ, ಓದುಗರ ಮನಸೆಳೆವಂತೆ ರಚಿಸಿರುವ ಹಾಡೇ ಭೀಮವ್ವನ "ಪತಿದಾನಕೊಟ್ಟ ಹಾಡು". ಸತ್ಯಭಾಮೆ ಶ್ರೀಹರಿಯನ್ನು ವಶೀಕರಿಸಿಕೊಂಡ ರೀತಿ, ಹಾಗೂ ನಾರದ ಹರಿಯೊಂದಿಗೆ ಪಂಥಕಟ್ಟಿ, ತುಳಸಿಯನ್ನು ಗೆಲ್ಲುವುದು—ಇವೇ ಈ ಹಾಡಿನ ಜೀವಾಳ. ಈ ಅಂಶಗಳನ್ನು ಚಿತ್ರಿಸುವಾಗ ವ್ಯಕ್ತವಾಗುವ ಭಾಮೆಹರಿಯರ ಆಳವಾದ ಹಾಗೂ ಅನನ್ಯವಾದ ಪ್ರೀತಿ, ಮತ್ತು ನಾರದ ತನ್ನ ಪಂಥ ಗೆಲ್ಲಲು ತೋರುವ ಅವನ ಸಹಜ ಸ್ವಭಾವಗಳಾದ ಜಾಣತನ, ಕಿಡಿಗೇಡಿತನ—ಇವು ಈ ಹಾಡಿನಲ್ಲಿ ಓದುಗರಿಗೆ ರಂಜನೆಯನ್ನು ನೀಡುವಂತಹ ಮುಖ್ಯ ಅಂಶಗಳಾಗಿವೆ. ಇದರೊಟ್ಟಿಗೆ, ದೈವಿಕತೆಯನ್ನು ಹೇಳಿದರೂ ಮನುಷ್ಯ ಸ್ವಭಾವವನ್ನು ಅತ್ಯಂತ ಸಹಜವಾಗಿ ಚಿತ್ರಿಸಿರುವ ರೀತಿ, ಪಾತ್ರಗಳಲ್ಲಿನ ಚುರುಕಾದ ಸಂಭಾಷಣೆಗಳು ಸಹೃದಯರ ಮನವನ್ನು ಗೆಲ್ಲುತ್ತವಲ್ಲದೆ, ಭೀಮವ್ವನ ಪ್ರತಿಭೆಗೆ ಸಾಕ್ಷಿಯಾಗಿದೆ.

ನಮ್ಮ ಸಾಹಿತ್ಯ ಪರಂಪರೆಯಂತೆಯೇ ಭೀಮವ್ವನೂ 'ಹಾಡಿ'ನ ಆರಂಭದಲ್ಲಿ ದೈವಸ್ತುತಿ ಮಾಡಿ 'ರತಿಪತಿಪಿತನ ದಾನವಕೊಟ್ಟ' ಕತೆಯನ್ನು ಹೇಳಲಾರಂಭಿಸಿದ್ದಾಳೆ.

ಹರಿಗೆ ಅಷ್ಟಮಹಿಷಿಯರಲ್ಲಿ ಅತ್ಯಂತ ಪ್ರಿಯಳಾದ ಅರಸಿ ಸತ್ಯಭಾಮೆಯಾಗಿದ್ದರೂ, ಉಳಿದವರ ಬಗೆಗೂ ಒಲವಿತ್ತು. ಆದ್ದರಿಂದಲೇ ಒಂದುದಿನ ಪಟ್ಟದರಸಿ ರುಕ್ಮಿಣಿಯ ಮನೆಗೆ ಬಂದ. ಇಬ್ಬರೂ ಸಂತೋಷದಿಂದ ಕಾಲಕಳೆವಸಲುವಾಗಿ ಪಗಡೆಯಾಟ ಆರಂಭಮಾಡಿದರು. ಹರಿಗೆ ಹೊತ್ತು ಹೋದದ್ದೇ ತಿಳಿಯಲಿಲ್ಲ. ಇತ್ತ ಅರಮನೆಯಲ್ಲಿ ಒಬ್ಬೊಂಟಿಗಳಾದ ಭಾಮೆಗೆ ತಳಮಳ ಶುರುವಾಯಿತು. ಹರಿಯನ್ನು ಬಿಟ್ಟಿರಲಾರದ ಆಕೆ ಹರಿ ಎಲ್ಲಿಹೋದ? ಏಕಿಷ್ಟು ತಡವಾಯ್ತು ಇತ್ಯಾದಿಯಾಗಿ ಚಿಂತಿಸುತ್ತ, ತನ್ನ ಸಖಿಯರನ್ನು ಕರೆದು, ದ್ವಾರಕೆಯಲ್ಲಿರುವ ಉಳಿದ ಅರಸಿಯರ ಮನೆಯಲ್ಲಿ ಕೃಷ್ಣನನ್ನು ಹುಡುಕಿಸಿದಳು. ರುಕ್ಮಿಣಿಯ ಮನೆಯಲ್ಲಿ ಹರಿಯಿರುವುದನ್ನು ತಿಳಿದು, ಸಹಿಸದೆ, ತಾನೇ ಹರಿಯನ್ನು ಕರೆತರಲು ಹೊರಟಳು. ಪಟ್ಟದರಸಿಯ ಮನೆಯಿಂದ, ಕೃಷ್ಣನನ್ನು ಮೋಡಿಮಾಡಿ ಕರೆತರಬೇಕಲ್ಲ, ಆದ್ದರಿಂದ ಕೋಟಿವರಹದ ಪೀತಾಂಬರ ಉಟ್ಟು, ನವರತ್ನದ ಕುಪ್ಪಸತೊಟ್ಟು, ಅಡಿಯಿಂದ ಮುಡಿಯವರೆಗೆ ಅತ್ಯಮೂಲ್ಯವಾದ ಆಭರಣಗಳಿಂದ ಶೃಂಗರಿಸಿಕೊಂಡು 'ಬಾಗಿ ಬಳುಕಿ, ಬಾಳೆಯ ಸುಳಿಯಂತೆ, ಸೋಗೆನವಿಲು ಸರಸದ ಗಿಳಿಯಂತೆ' 'ಭೀಮೇಶಕೃಷ್ಣ'ನ ಅರಮನೆಗೆ ಬಂದಳು.



ಭಾಮೆಗೆ ಹರಿಯಮೇಲೆ ಬಹಳ ಕೋಪ ಬಂದಿತ್ತು. ಅಪರಿಮಿತ ಸುಂದರಿಯಾದ ತನ್ನ ಮೋಹದ ರಾಣಿಗೆ ಸಿಟ್ಟು ಬಂದಿರುವುದನ್ನು ಕಂಡೇ ಹರಿಗೆ ಎದೆನಡುಗಿತು, ತನ್ನನ್ನ ಮತ್ತೆ ಬಳಿ ಸೇರಿಸುವಳೋ ಇಲ್ಲವೋ ಎಂದು ಶಂಕೆ ಮೂಡಿತು. ಆಕೆಯನ್ನು ಬಿಟ್ಟು, ತಾನೇಕೆ ಬಂದೆ ಎಂದು ಪರಿತಪಿಸಿದ ಹರಿಗೆ ಬಾಯಿಂದ ಮಾತೇ ಬರಲಿಲ್ಲ. ಸತ್ಯಭಾಮೆಯನ್ನು ರಮಿಸಿ, ಕೋಪ ಇಳಿಸುವ ಮನಸ್ಸಾದರೂ, ರುಕ್ಮಿಣಿಯೆದುರಿಗೆ ರಮಿಸಲಾಗಲಿಲ್ಲ. ತನ್ನ ದೌರ್ಬಲ್ಯಕ್ಕೆ ತಾನೇ ಪರಿತಪಿಸುತ್ತ "ಯಾಕೆ ಪಡೆದಳೆನ್ನ ಜನನಿ, ಸಾಕಿದಳ್ಯಾಕೆ ತೋದೆ, ಅನೇಕ ಸತಿಯರನು ಗಂಟು ಹಾಕಿದನ್ಯಾತಕೊ ಬ್ರಹ್ಮ, ಈ ಸೋಳಸಾವಿರ ಸತಿಯರನ್ನು ಸಂತೈಸುವುದು ಹೇಗೆ' ಎಂದು ಚಿಂತಿಸುತ್ತ ಹರಿ ಒಂದೆಡೆ ಮಲಗಿದ.

ಅಷ್ಟರಲ್ಲಿ "ಹಚ್ಚಿದ ಎಳೆನಾಮ ಒತ್ತಿದ ಶ್ರೀಮುದ್ರೆ, ಕೃಷ್ಣಾಜಿನದ ಪೆಟ್ಟಿಗೆಯನ್ನೊತ್ತು, ಹಸ್ತದಲ್ಲಿ ತಂಬೂರಿಯ ಮೀಟುತ್ತ ಸರ್ಪಶಯನನ ನಾಮವನ್ನು ಕೊಂಡಾಡುತ್ತ" ನಾರದನ ಆಗಮನವಾಯಿತು. ಮೊದಲೇ ಕೀಟಲೆಯಲ್ಲಿ ಸಿದ್ಧಹಸ್ತನಾದ ನಾರದ ಹರಿಯನ್ನು ಕಂಡೊಡನೆ ಯೋಗಕ್ಷೇಮ ವಿಚಾರಿಸಿ ಕೇಳುವ ಪ್ರಶ್ನೆಯಿದು; "ಪಟ್ಟದರಸಿ ರುಕ್ಮಿಣಿ, ಭಾಮೇರಿಬ್ಬರು ಭಕ್ತಿಯಿಂದನುಕೂಲರಾಗಿಪ್ಪೋರೆ? ಚಿತ್ತದೊಳಗೆ ಚಿಂತೆಯಿಂದ ನಿನ ಮುಖಪದ್ಮ ಬತ್ತಿ ಬಾಡಿಹುದೇಕೊ ಭೀಮೇಶಕೃಷ್ಣ?" ಹರಿಯೋ ಮುಗ್ಧ. ಆಪ್ತಸಖನಂತೆ ಭಾವಿಸಿ, ನಾರದನಿಗೆ ಆಗ ತಾನೇ ಭಾಮೆ ಅಲ್ಲಿಗೆ ಬಂದು, ತನ್ನ ಮೇಲೆ ಮುನಿಸಿಕೊಂಡು ಹೋದ ವಿಷಯವನ್ನು ದುಃಖದಿಂದ

ಭಾಮೆ ಬಂದವಳೇ ಅಸಮಾಧಾನದಿಂದ ಹರಿಯ ಮೇಲೆ ತನ್ನ ಕೋಪವನ್ನು ವ್ಯಕ್ತಪಡಿಸಿ, ತರಾಟೆಗೆ ತೆಗೆದುಕೊಂಡ ರೀತಿಯಿದು:

ದಿಟ್ಟೆ ರುಕ್ಮಿಣಿ ಮಂದಿರ ಬಿಟ್ಟು ಬರುವುದಕೆ
ಹುಟ್ಟಲೊಲ್ಲದುಯೇನೊ ಮನಸು ಮಾಧವನೆ,
ಹೆಚ್ಚಿನರಸಿಯು ಈಗ ಮೆಚ್ಚುಮಾಡಿದಳೊ
ಹುಚ್ಚು ಹಿಡಿಸಿದಳೇನೊ ಅಚ್ಯುತ ನಿನಗೆ
ಅತ್ತಿತ್ತ ಪೋಗದಂದದಲಿ ರುಕ್ಮಿಣಿಯು
ಮತ್ತೇನು ತೈಲ ಸಿನ ನೆತ್ತಿಗೂಂದಳೊ...

ಪಗಡ ಮಾಯಗಾತಿ ಈ ರುಕ್ಮಿಣಿಯ ಕೂಡ ನೀನು ಪಗಡೆಯಾಡುವುದರಲ್ಲೇನು ಪರಮ ಆಶ್ಚರ್ಯ! ಅವಳೊಂದಿಗೇ ಸುಖವಾಗಿದ್ದುಕೋ ಇತ್ಯಾದಿಯಾಗಿ ಕಟುವಾಗಿ ಮಾತನಾಡುತ್ತ, ತನ್ನ ಸವತಿ ಮಾತ್ಸರ್ಯವನ್ನೂ ಧಾರಾಳವಾಗಿ ತೋರಿ, ಅಲ್ಲಿ ನಿಲ್ಲದೆ, ದಡದಡನೆ ತನ್ನ ಅರಮನೆಗೆ ಬಂದುಬಿಟ್ಟಳು. ಬಂದವಳೇ, ಕೋಪವೆಲ್ಲ ಅಳುವಾಗಿ ಮಾರ್ಪಡಲು 'ಅಣಿಮುತ್ತಿನ ಮಂಚದಲಿ ಕಂಗಳಿಂದುದಕ ಸುರಿಸುತ್ತ' ಮಲಗಿಬಿಟ್ಟಳು.

ಒಬ್ಬರನ್ನು ಪ್ರೀತಿಸಿದರೆ ಮತ್ತೊಬ್ಬರಿಗೆ ಕ್ರೋಧ ಆದ್ದರಿಂದಲೇ ಹರಿಗೆ, ತನ್ನ ಮೋಹದ ಮಡದಿ

ಶ್ರೀಮತಿ ಎನ್. ಪುಷ್ಪ.

ಹೇಳಿಕೊಂಡ. ಅಲ್ಲದೆ, ಕೈಮುಗಿದು ಆ ಭಾಮೆಗೆ ವಿವೇಕ ಹೇಳಿ ಮತ್ತೆ ಆಕೆಯನ್ನು ತನ್ನೊಂದಿಗೆ ಕರೆಸು ಎಂದು ಕೇಳಿಕೊಂಡ ಅಲ್ಲದೆ ಕಾರ್ಯ ಸಫಲವಾದರೆ ಅವನಿಗೆ ಬೇಡಿದ್ದನ್ನು ಕೊಡುವುದಾಗಿ ವಾಗ್ದಾನವಮಾಡಿದ. ಹರಿಯ ಮಾತುಗಳನ್ನು ಕೇಳಿ ನಾರದ "ಸಿರ್ವಾನನ ಕೈಯೊಳಗೆ ಶ್ರೀನಾಥ ನೀನೆಂದು ನಕ್ಕು ಮನದೊಳಗೆ ಹಾಸ್ಯ ಮಾಡಿ" ಹರಿಯನ್ನು ಆಟವಾಡಿಸಲು ಮನಸ್ಸು ಮಾಡಿದ. ಒಂಟಿ ಜೀವಿಯಾದ ನನಗೆ ಹಣ ಹೊನ್ನು ಏನೂ ಬೇಡ, ಬೇಕಾದ್ದ 'ನಿನ್ನ ಶ್ರೀವಕ್ಷದಿ ನಲಿದಾಡೊ ಅಚ್ಚ ಶ್ರೀತುಳಸಿಮಾಲೆ' ಎಂದ. ಹರಿಗೆ ಪೀಕಲಾಟಕ್ಕೆ ಬಂತು. ತನ್ನ ಪ್ರಿಯ ಮಡದಿ 'ತುಳಸಿ' ಯನ್ನು ಕೊಡಲಾರೆನೆಂದ. ಒಡನೆ ನಾರದ, "ಅಡವಿಯೊಳು ಬೆಳೆದಿದ್ದ ಗಿಡದ ತೊಪ್ಪಲ ತಂದು ಮಡದಿಯೆಂಬುವರೆ, ಮಹರಾಯ ಕಡಿಮೆ ಹೆಂಡಿರೆ, ಹದಿನಾರು ಸಾವಿರ ಮಂದಿ, ಬಿಡು ನಿನ್ನ ಚಾಳಿ ತರವಲ್ಲ" ಎಂದು ಕೃಷ್ಣನನ್ನೇ ರೇಗಿಸಿದ. ಹರಿ ಅದಕ್ಕೂ ಜಗ್ಗದಾಗ ರುಕ್ಮಿಣಿಗೆ ತುಳಸಿಯಬಗ್ಗೆ ಸವತಿ ಮಾತ್ಸರ್ಯ ಮೂಡಿಸಿದ; "ಬಾಡಿ ಬತ್ತಿ ಹೋಪಳ ತಂದು, ನಿನಗೂ ಹೆಚ್ಚು ಮಾಡಿ ತಾ ಮುಡಿಯಲ್ಹಡು ಮೋನು, ಗಾಢಾಂಧಕಾರ ಪ್ರಳಯದಲ್ಲೀತನ ಸೇವೆ ಮಾಡೋದ್ಯಾಕಮ್ಮ ಮಹದೇವಿ", ಆದ್ದರಿಂದ ನಿನ್ನಿಂದ ಮೇಲೆ ಕುಳಿತಿರುವ ಈ ವನಮಾಲೆಯನ್ನು ತೆಗೆದು ನನ್ನ ಕೈಗೆಸಿ ಎಂದು ಕಿಚ್ಚೆಬ್ಬಿಸಿದನು. ನಾರದನ ಮಾತುಗಳೆಲ್ಲ ರುಕ್ಮಿಣಿಗೆ ನಿಜವಾಗಿ ತೋರಿತು. ಆಕೆಯನ್ನು ರಮಿಸಿ ಸಮಾಧಾನಪಡಿಸಲು ಹರಿಗೆ ಸಾಕಾಗಿಹೋಯಿತು. ವಿಗಡಗಂಟಕ ಮುನಿ ನಾರದ, ತನ್ನ ಕಾರ್ಯಸಾಧನೆ ಮಾಡಿಕೊಟ್ಟರೆ ಸಾಕೆಂದು 'ಎನ್ನ ಭಾಮೆ ಅಲ್ಲಿ ಬಹಳ ಬಳಲುತ್ತಿದ್ದಾಳೆ. ಅವಳನ್ನು ಮೊದಲು ಸಮಾಧಾನಗೊಳಿಸೆಂದು ಕಳುಹಿಸಿದನು.

ಪಿಸುಣನಾದ ನಾರದನ ಮುಂದಿನ ಕೆಲಸ ಭಾಮೆಯ ಮನಸ್ಸನ್ನು ಕೆಡಿಸುವುದಾಗಿತ್ತೇ ಹೊರತು ಹರಿಯ ಬಗ್ಗೆ ಪ್ರೀತಿ ಮೂಡಿಸುವುದಾಗಿರಲಿಲ್ಲ. ನಾರದನನ್ನು ಕಂಡೊಡನೆ ಭಾಮೆ ಆದರಿಸಿ ಸತ್ಕರಿಸಿದಳು, ಮೊದಲೇ ಹೇಗೆ ಜಗಳ ತಂದು ಹಾಕಬೇಕೆಂದು ಯೋಚಿಸಿದ ನಾರದ ಆಗ ತಾನೇ ತಾನು ಹರಿಯನ್ನು ನೋಡಿಕೊಂಡು ಬಂದುದಾಗಿಯೂ, ರುಕ್ಮಿಣಿಯ ಮೇಲೆ ಅವನಿಗಿರುವ ಪ್ರೀತಿ ಅತ್ಯಂತ ಆಳವಾದುದಾಗಿಯೂ ತಿಳಿಸಿದ. ಅಲ್ಲದೆ ಅಷ್ಟು ಮಟ್ಟಿಗೆ ಒಬ್ಬರನ್ನೊಬ್ಬರು ಹೊಂದಿಕೊಂಡಿರುವ ಸತಿಪತಿಯರನ್ನು ತಾನೆಲ್ಲೂ ಕಂಡೇ ಇಲ್ಲವೆಂದೂ, ಕೃಷ್ಣ ಭಾಮೆಯನ್ನು ಬಿಟ್ಟು ಬಿಟ್ಟಿದ್ದಾನೆಂದೂ ಹೇಳಿ ಅವಳ ಮನಸ್ಸಿಗೆ ಬೆಂಕಿ ಹಾಕಿದ.

ಈ ಮಾತುಗಳನ್ನು ಕೇಳುತ್ತಲೇ ಭಾಮೆಗಾದ ಸ್ಥಿತಿಯನ್ನು ಘೀಮವ್ವ ಬಹಳ ಸಹಜವಾಗಿ, ದಮಣೀಯವಾಗಿ ಚಿತ್ರಿಸಿದ್ದಾಳೆ: "ನುಡಿದನುಡಿ ಕೇಳುತಿದೆ ಮೊಡೆದು ಝಲ್ಲೆಂದಾಗ। ನಡುಗುಟ್ಟಿ ನಾಗವೇಣಿಯ ದೇಹ ತಲ್ಲಣಿಸೆ। ಕಡಲ ಶಯನನ ಕರುಣವಿಲ್ಲಿನ್ನ ಮ್ಯಾಲೀಗ। ಸುಡು ಹೆಣ್ಣು ಜನ್ಮ ಸಂಸಾರವ್ಯಾಕೆಂದೆನುತ। ಬಿಡುವೆನೀ ಪ್ರಾಣವೆಂದೆನುತ ದೃಢಬುದ್ಧಿಯಲಿ। ಹೆಡೆ ಆಡೋ ಸರ್ಪನಂದದಲಿ ಉಸಿರ್ಹಾಕುತ್ತ। ಖಿಡಿ ಖಿಡಿ ಕೆಂಡದಂಥ ಕೋಪತಾಪದಲಿ। ಗಡಗಡನೆ ಹೊರಳುತಲಿ ಕೊಡಕೊಡನೆ ಬೆವರುತಲಿ। ಧಡಧಡನೆ ಕಣ್ಣಿಂದ ಉದಕ ಉದಕ ಸುರಿಸುತಲಿ। ಮುಡಿ ಘಟ್ಟಿಸುತಲಿ ಮೂರ್ಛಿತಳಾಗಿ ಬೀಳುತಿರೆ..... "

ಕಾರ್ಯ ಫಲಿಸಿದ್ದಕ್ಕೆ ಒಳಗೇ ಹರ್ಷಿತನಾಗಿ ಉಪಾಯದಿಂದ ಕಾರ್ಯ ಸಾಧಿಸಲು ಅದೇ ಸರಿಯಾದ ಸಮಯವೆಂದು ಭಾವಿಸಿ ಭಾಮೆಗೆ ಬುದ್ಧಿ ಹೇಳತೊಡಗಿದ. 'ಎಲೈ ಭಾಮೆ ಇಷ್ಟಕ್ಕೆಲ್ಲ ಜೀವದಾಸೆ ತೊರೆಯುವರೆ ? ಹರಿ ಸದಾ ನಿನ್ನ ಬಳಿಯೇ ಇರಬೇಕಾದರೆ ಒಂದುಪಾಯವಿದೆ. "ನಿನ್ನ ಪತಿಯ ದಾನವಮಾಡು". ಇದರಿಂದ ಪುತ್ರಸಂತಾನ, ಸಕಲೈಶ್ವರ್ಯ ಮುತ್ತೈದೆತನವುಂಟು – ಎಂದು ಆಸೆ ಹುಟ್ಟಿಸಿದ. ಅಲ್ಲದೆ, ಅವಳಿಗೆ ಸಾವಿರಾರುಮಂದಿ ಸವತಿಯರಿರುವುದರಿಂದ ಯಾರಾದರೂ ಕಲಸಕ್ಕಡ್ಡಿ ಬರಬಹುದು, ಎಚ್ಚರವಾಗಿರಬೇಕೆಂದು ಹೇಳಿ ಭಾಮೆಯ ಮನವನ್ನು ಮತ್ತೂ ಗಟ್ಟಿಗೊಳಿಸಿದ. ನಾರದನ ಮಾತನ್ನು ನಡೆಸಲು ನಿರ್ಧರಿಸಿದ ಭಾಮೆಗೆ ಕೃಷ್ಣನ ಮೇಲಿರುವ ಕೋಪವೆಲ್ಲ ಮಾಯವಾಯಿತು. ರುಕ್ಮಿಣಿಯ ಮನೆಗೆ ಹೋಗಿ ಉಪಾಯದಿಂದ ಹರಿಯನ್ನು ಮನೆಗೆ ಕರೆತಂದಳು. ನಂತರ ಕೃಷ್ಣನಿಗೆ, "ನನಗೋ ಬಹಳಮಂದಿ ಸವತಿಯರಿದ್ದಾರೆ. ಆದ್ದರಿಂದ ನಿನ್ನೊಡನೆ ಇರಲು ಬಹಳ ಕಷ್ಟವಾಗುತ್ತಿದೆ ಹೀಗಾದರೆ ನನ್ನ ಬಾಳಿನಗತಿಯೇನು" ಆದ್ದರಿಂದ "ದಾನವಾಂತಕ ನಿನ್ನ ದಾನವ ಕೊಟ್ಟು. ನಿಧಾನಿಸಳಾಹೆನೊ ಮನಕೆ, ಜ್ಞಾನಿಗಳೊಡೆಯನೆ ಗೆಲಿಸೆನ್ನಾ ಭೀಷ್ಮವ, ಏನೆಂಬಿದಕೆ ಸುರಥೇನು, ಭಕ್ತದೇನು" ಎಂದು ಕೇಳಿದಳು. ಅದಕ್ಕೆ ಕೃಷ್ಣ "ಜಾಣರೊಳಗಧಿಕೆ, ಬಹುಜಾಣೆ ಸತ್ಯಭಾಮೆ, ರುಕ್ಮಿಣಿಯೂ ಈ ವ್ರತವರಿಯಳು ಮಾಡು ಮಾಡು ನಿನ್ನ ವ್ರತವ" ಎಂದು ಹುರಿದುಂಬಿಸಿದ.

ಭಾಮೆ, ಹರಿಗೆ ಸ್ನಾನಮಾಡಿಸಿ ವಿವಿಧ ರೀತಿಯಲ್ಲಿ ಶೃಂಗರಿಸಿದಳು. ಬ್ರಾಹ್ಮಣರನ್ನು ಕರೆಸಿ, ಪೀಠಗಳಲ್ಲಿ ಕುಳ್ಳಿರಿಸಿ, ತಾಂಬೂಲ ಮಂತ್ರಾಕ್ಷತೆಯ ಸುರಿಸಿ, ಹಣ, ಹೊನ್ನು ದಕ್ಷಿಣೆಯಿಟ್ಟು, ಹರಿಸಹಿತ ದಾನಮಾಡಲನುವಾದಳು. ಬ್ರಾಹ್ಮಣರ ಪಾದದಲ್ಲಿ ಬಿದ್ದು "ಕೊಡುವೆ ನಾನು ಶ್ರೀಕೃಷ್ಣದಾನವ ಹಿಡಿವೋರೆಲ್ಲ ಬನ್ನಿರಿ ನೀವು" ಎಂದೊಡನೆ ಶ್ರೀಹರಿಯನ್ನು 'ಸಾಕುವ' ಶಕ್ತಿ ತಮಗಾರಿಗೂ ಇಲ್ಲವೆನ್ನುತ್ತ ಬಂದ ಬ್ರಾಹ್ಮಣರೆಲ್ಲರೂ ಹರಿಯನ್ನು ನಿರಾಕರಿಸಿದರು. ವ್ರತ ಫಲಿಸದ್ದಕ್ಕಾಗಿ ಭಾಮೆ ಅತ್ಯಂತ ದುಃಖದಿಂದ, ನಾರದನ ಕಾಲಿಗೆ ಬಿದ್ದು, ಅವನೇ ದಾನ ತೆಗೆದುಕೊಳ್ಳಬೇಕೆಂದು ಕೇಳಿಕೊಂಡಳು. ನಾರದನಿಗೆ ಬೇಕಾಗಿದ್ದೂ ಅದೇ. ಆದರೂ ತೋರ್ಗೊಡದೆ "ಮನೆಮಾರು ಹೆಂಡಿರಿಲ್ಲ, ಧನದ್ರವ್ಯ ಮೊದಲಿಲ್ಲ,

ನಿನ್ನ ಪತಿಯು ಸಾಕೋ ಬಗೆ ಹ್ಯಾಗೆ" ಇತ್ಯಾದಿಯಾಗಿ ಹೇಳಿ ನಾಟಕವಾಡುತ್ತ ಕಡೆಗೆ "ಅದಿದ್ದಾಗಲಿ ಕೊಡು ಭೀಮೇಶ ಕೃಷ್ಣನ ದಾನ. ನಿನ್ನಸೊಲ್ಲ ಕೇಳಲಾರೆ" ಎನುತ್ತ ಭಾಮೆಯಿಂದ ಹರಿಯನ್ನು ದಾನಪಡೆದ.

ಭಾಮೆಯೇನೋ ಉತ್ಸಾಹದಿಂದ ದಾನ ಕೊಟ್ಟು ಬಿಟ್ಟಳು. ನಂತರ ಆಕೆಗೆ ನಾನಾಯೋಚನೆಗಳು ಪ್ರಾರಂಭವಾಯಿತು. ಕೃಷ್ಣನ ಉಳಿದ ಹೆಂಡತಿಯರು, ತಾಯಿ ದೇವಕಿಯರನ್ನೆಲ್ಲ ನೆನೆಸಿಕೊಳ್ಳುತ್ತಲೇ, ಅವರಿಂದ ತನಗೊದಗಿ ಬರುವ ಛೀಮಾರಿಯನ್ನು ಹೇಗೆ ಸಹಿಸುವುದೆಂದು ಭಯವಾಯಿತು. ಹೋಗಲಿ ಎಂದರೆ, ಅವಳಿಗೇ ಹರಿಯನ್ನು ಬಿಟ್ಟಿರಲಾಗಲಿಲ್ಲ. ಕೃಷ್ಣನಿಲ್ಲದೆ ಪ್ರಾಣ ಹೋದಂತೆಯೇ ಎಂದು ಅಳುತ್ತ ಬಿದ್ದು ಹೊರಳಾಡಲಾರಂಭಿಸಿದಳು.

"ಸರ್ವಸ್ವತಂತ್ರ"ಳಾದ ಭಾಮೆ ಹರಿಯನ್ನು ದಾನಮಾಡಿದ ವಿಷಯ ಇಡೀ ದ್ವಾರಕೆಗೇ ತಿಳಿಯಿತು. ವಿಷಯ ತಿಳಿದೊಡನೆ ದೇವಕಿ ಬಲರಾಮನೊಂದಿಗೆ ಭಾಮೆಯ ಅರಮನೆಗೆ ಬಂದು, ಸೊಸೆಯನ್ನು ತರಾಟೆಗೆ ತೆಗೆದುಕೊಂಡಳು, "ಚೆಲುವೆ ನೀನೆಂದು ಮುದ್ದಿಸಿದೆ ಕೋಮಲೆ, ತಲೆಯ ಮ್ಯಾಲೇರಿ ಕುಳಿತ್ಯಲ್ಲೆ ಹೊಯ್ಯಾಲಿ... ತಾರಾಪತಿಯ ವದನ ತೋರು, ತೋರದಿದ್ದರೆ ನಿನ್ನನ್ನು ಬಿಡುವುದಿಲ್ಲ". ಅತ್ತೆಯ ಕಟುನುಡಿಗಳನ್ನು ಸೈರಿಸದ ಭಾಮೆ ತಟ್ಟನೆದ್ದು ಅತ್ತೆಯ ಕಾಲಿನ ಮೇಲೆ ಬಿದ್ದು "ನಾನು ಕೇಳರಿಯೆ ಈ ವ್ರತದ ಹಿಂದೆಂದು, ಹೇಳಿ ಮಾಡಿಸಿದ ನಾರದನು ತಾ ಬಂದು", "ಭೀಮೇಶ ಕೃಷ್ಣನ ಉಳಿಸುವ ಉಪಾಯ ಹೂಡಿರಿ ಇಲ್ಲದಿದ್ದರೆ ಈಗಲೇ ದೇಹ ತ್ಯಜಿಸುವೆ" ಎಂದು ಹಲುಬಿದಳು.

ಕೃಷ್ಣನನ್ನು ಹುಡುಕುವ ಕೆಲಸ ಆರಂಭವಾಯಿತು. "ಬಲರಾಮ ಮುಸಲವನೊತ್ತು ಖುದು ಕೆಲ್ಲಿಂದ್ಹೊರಟು" ಕೃಷ್ಣನನ್ನು ಕರೆದೊಯ್ಯುತ್ತಿದ್ದ ಮುನಿಯನ್ನು ಕಂಡು ಬಿಸಿಲಿನಲ್ಲಿ ದಣಿದು, ಅಶ್ವತ್ಥ ಗಿಡದ ತಂಪಿನಲ್ಲಿ ಕುಸುಮನಾಭನ ಸಹಿತ ಕುಳಿತಿದ್ದ ಮುನಿಯ ಚರಣಕ್ಕೆರಗಿದ. ಬಲರಾಮ ಏಕೆ ಬಂದಿರುವನೆಂದರಿತ ನಾರದ, ಒಮ್ಮೆ ದಾನ ಕೊಟ್ಟ ನಂತರ ಆಯಿತು, ಸಾಕ್ಷಾತ್ ಶಿವಬ್ರಹ್ಮರೇ ಬಂದು ಕೇಳಿದರೂ, ಹರಿಯನ್ನು ಹಿಂತಿರುಗಿಸುವುದಿಲ್ಲವೆಂದು ಹಟಹಿಡಿದ. ಕಡೆಗೆ ಬಲರಾಮ ನಾರದನನ್ನು ವಿಧವಿಧವಾಗಿ ರಮಿಸಿ, 'ರಂಗನ ತೂಕವ ತೂಗಿ ಬಂಗಾರವ ಕೊಡುವೆ ನಿನಗೆ, ಮಂಗಳಾಂಗನ ಬಿಡು' ಎಂದು ನಾರದನ ಪಾದಕ್ಕೆ ಬೀಳಲು, ತನ್ನ ಮುಂದಿನ ಲಾಭವನ್ನು ಯೋಚಿಸುತ್ತ ನಾರದ ಒಪ್ಪಿದ.

ಹರಿಯನ್ನು ತೂಗುವ ಕೆಲಸ ಆರಂಭವಾಯಿತು ಸತ್ರಾಜಿತನು ಸಂಪಾದಿಸಿದ ಸಮಸ್ತ ಭಂಡಾರಗಳು, ಪುತ್ಥಳಿಸರ, ಚಂದ್ರಹಾರಗಳು, ಅಷ್ಟ ಮಹಿಷಿಯರ ಅರಮನೆಯ ಬಂಗಾರ, ಸೋಳಸಾವಿರ ಸತಿಯರ ಬಂಗಾರ, ದೇವಕಿ, ಯಶೋದೆ, ರೋಹಿಣಿ, ಬಲರಾಮ, ರೇವತಿಯರ ಆಭರಣಗಳು, ಪಟ್ಟದರಸ ಉಗ್ರಸೇನನ ಮನೆಯ ಸಮಸ್ತ ಆಭರಣಗಳು—ಎಲ್ಲವನ್ನೂ ಆನೆಯ ಮೇಲೆ ತಂದು ರಾಶಿ ರಾಶಿ ಹಾಕಿದರೂ ತಕ್ಕಡಿಯ ಒಂದು ತಟ್ಟೆ ಸ್ವಲ್ಪವೂ ಮೇಲೇರಲಿಲ್ಲ. ಒಡನೆ ನಾರದ ಹರಿಯನ್ನು ತಕ್ಕಡಿಯಿಂದ ಎಬ್ಬಿಸುತ್ತ, ಬಲರಾಮ ನಾಡಿದ ಪಂಥ ಕೇಳಿ ಸೋಜಿಗವಾಯಿತೀಗೆನ್ನ ಮನಕೆ, ಈ ನೀಲವರಣ ನನಗಿರಲಿ, ಸುವರಣ ನಿಮಗಿರಲಿ" ಎಂದು ಹರ್ಷದಿಂದ ಕುಣಿಯುತ್ತ ಹೊರಟ, ಈಗೇನು ಮಾಡುವುದೆಂದು ಕೈಹಿಸುಕಿಕೊಳ್ಳುತ್ತ ಎಲ್ಲರೂ ಗಲಿಬಿಲಿಗೊಂಡು, ನಾರದನನ್ನು ಸ್ವಲ್ಪ ಹೊತ್ತು ಅಲ್ಲೇ ಇರುವಂತೆ ಮಾಡಲು ಉಪಾಯ ಯೋಚಿಸುತ್ತಿರುವಾಗ, ಹರಿಯೇ ಕಣ್ಸನ್ನೆಯಿಂದ ಭಾಮೆಯನ್ನು ಕರೆದ. "ಪಟ್ಟದರಸಿಯ ಮನೆಗೆ ತಟ್ಟನೆ ನೀಪೋಗಿ ಶ್ರೀಷ್ಠ ರುಕ್ಮಿಣಿಯ ಕರೆತಂದರೆ ನಿನಗೀಗ ಅಮ್ಮ, ಕಾರ್ಯಗಳು ಕೈಗೊಡುತ್ತ" ವೆಂದು ಉಪಾಯ ಹೇಳಿಕೊಟ್ಟು, ಭರವಸೆಮೂಡಿಸಿ ಭಾಮೆಯನ್ನು ರುಕ್ಮಿಣಿಯ ಮನೆಗೆ ಕಳುಹಿದ.

ಮನೆಗೆ ಬಂದ ಭಾಮೆಯನ್ನು ರುಕ್ಮಿಣಿ ಆದರಿಸಿದಳು. ವಿಷಯವೇನೆಂದು ಕೇಳಲು, ನಾರದ ತನ್ನಿಂದ ಮಾಡಿಸಿದ ಅನಾಹುತದ ಕಾರ್ಯವನ್ನೂ, ಅದರಿಂದ ಎಲ್ಲರಿಗೂ ಒದಗಿ ಬಂದಿರುವ ಸಂಕಟವನ್ನೂ ಹೇಳಿದಳು. ಜೊತೆಗೆ ದುಃಖಸಾಗರದಲ್ಲಿ ಮುಳುಗಿರುವ ತನ್ನನ್ನೀ ಸಂದರ್ಭದಲ್ಲಿ ಮೇಲೆತ್ತಲು ರುಕ್ಮಿಣಿಗೆ ಮಾತ್ರ ಸಾಧ್ಯವೆಂದು ಹೇಳಿ, ತನ್ನರಮನೆಗೆ ಕರೆದು ತಂದಳು.

ಭಾಮೆಯ ಅರಮನೆಗೆ ಬಂದ ರುಕ್ಮಿಣಿ ಮೊದಲು ಅತ್ತೆ ಮಾವನ ಚರಣಕ್ಕೆರಗಿದಳು. ನಂತರ ನಾರದನನ್ನು ನೋಡಿ ಅರ್ಥಪೂರ್ಣವಾಗಿ ನಗುತ್ತ ಆತನಿಗೆ ವಂದಿಸಿ, "ಕೈಗೂಡಿತೇ ನಿಮ್ಮ ಕಾರ್ಯಗಳು" ಎಂದು ಹಾಸ್ಯದಿಂದ ಕೇಳಿದಳು. ಭಕ್ತಿಯಿಂದ ಹರಿಚರಣಗಳಿಗೆರಗಿ "ಮಕ್ಕಳಾಟಿಕೆ ನೀವು ಮರೆಯಲಿಲ್ಲವೇ" ಎಂದು ನಕ್ಕು ಲೇವಡಿಮಾಡಿದಳು. ಹರಿಯನ್ನು ತಕ್ಕಡಿಯಲ್ಲಿ ತೂಗುವುದನ್ನು ನೋಡುವ ಭಾಗ್ಯ ದೇವಕಿ, ಬಲರಾಮರೆಲ್ಲರಿಗೂ ಇಂದು ಸಿಕ್ಕಿತಲ್ಲ ಎಂದು ಹೇಳಿ ಎಲ್ಲರನ್ನೂ ನಗಿಸಿ ರಮಿಸಿದಳು. ಅನಂತರ ಹರಿಯನ್ನು ನಾರದನಿಂದ ಬಿಡಿಸುವ ಕಾರ್ಯಕ್ಕೆ ಅಣಿಯಾದಳು. ತಕ್ಕಡಿಸಹಿತ ಶ್ರೀಹರಿಗೆ ಪ್ರದಕ್ಷಿಣೆ ಮಾಡಿ, ವೃಂದಾವನದ ಕಟ್ಟೆಯನ್ನೇರಿದಳು. ಗಂಧ, ಕುಂಕುಮ, ಧೂಪ, ದೀಪ ನೈವೇದ್ಯಗಳಿಂದ ಶ್ರೀ ತುಳಸಿಗೆ ಅರ್ಚನೆ ಮಾಡಿ ಭಕ್ತಿಯಿಂದ ಕೈಮುಗಿದಳು, ನಂತರ "ಅಚ್ಯುತಾನಂತನ ಸರಿ ಆಗಬೇಕೆಂದು" ಭಕ್ತಿಯಿಂದ ಕೇಳಿಕೊಳ್ಳುತ್ತ ಪಚ್ಚೆಯಂತೆ ಹೊಳೆವ ಒಂದು ಶ್ರೀ ತುಳಸೀದಳವನ್ನು ಕಿತ್ತು ಅಚ್ಚ ಮುತ್ತಿನ ಹರಿವಾಣದೊಳಗೆ ಇಟ್ಟುಕೊಂಡಳು.

ಸಭೆಯೊಳಗೆ ಬಂದ ರುಕ್ಮಿಣಿ ತಕ್ಕಡಿಯ ಒಂದು ತಟ್ಟೆಯಲ್ಲಿದ್ದ ಚಿನ್ನದ ಆಭರಣಗಳನ್ನೆಲ್ಲ ತೆಗೆಸಿದಳು. ತಂದ ತುಳಸೀದಳವನ್ನು ಭಕ್ತಿಯಿಂದ ತಕ್ಕಡಿಯ ತಟ್ಟೆಯಲ್ಲಿ ಇಟ್ಟು, "ಕೃಷ್ಣಾರ್ಪಣ" ವೆಂದಳು. ಒಡನೆ ಎಲ್ಲರೂ ನೋಡುತ್ತಿದ್ದಂತೆಯೇ ಕೃಷ್ಣನಿದ್ದ ತಕ್ಕಡಿಯ ತಟ್ಟೆ "ತಲೆಬೋದು ನೆಲಗೆಯು ತಲೆಗೆ ಹಾಕುವಂತೆ" ಮೇಲೆದ್ದಿತು. ಎಲ್ಲರೂ ಆಶ್ಚರ್ಯಚಕಿತರಾದರು. ಪಂಥದಲ್ಲಿ ಗೆದ್ದ ನಾರದ ತುಳಸಿಯನ್ನು ತಲೆಯ ಮೇಲೆ ಧರಿಸಿಕೊಂಡು ದೇವಲೋಕಕ್ಕೆ ತೆರಳಿದ.

ಭಕ್ತಿಯನ್ನೇ ಸ್ಥಾಯಿಯಾಗಿ ಹೊಂದಿರುವ ಭೀಮವ್ವನ ಈ ದೀರ್ಘ ಹಾಡಿನಲ್ಲಿ ಭಾಷೆ, ಭಾವಕ್ಕೆ ತಕ್ಕಂತೆ ಸರಳವಾಗಿ, ಸುಲಲಿತವಾಗಿ, ನಿರರ್ಗಳವಾಗಿ ಹರಿದಿದೆ. ಕಣ್ಣುಕಟ್ಟುವಂತೆ ಪಾತ್ರ ಚಿತ್ರಣಮಾಡುವ ಸಾಮರ್ಥ್ಯ ಭೀಮವ್ವನಿಗಿದೆ ಯೆಂದು ಹೇಳಲು, ಆಕೆ ಚಿತ್ರಿಸಿರುವ ಕಿಡಿಗೇಡಿ ನಾರದನ ಚಿತ್ರ, ಭಾಮೆಯ ಮುನಿಸು ಸೆಡವುಗಳ ಚಿತ್ರವೇ—ಸಾಕ್ಷಿಯಾಗಿವೆ. ಹೇಳಿರುವ ಕತೆ ದೈವಕತೆಯಾದರೂ, ಲೋಕಾನುಭವದಲ್ಲಿ ಸಾಂಸಾರಿಕವಲಯಕ್ಕಷ್ಟೇ ಸೀಮಿತವಾಗಿರುವ ಭೀಮವ್ವನ ಪ್ರತಿಭೆ, ಸಾಂಸಾರಿಕವಲಯದಲ್ಲಿನ ಸೂಕ್ಷ್ಮಾತಿ ಸೂಕ್ಷ್ಮ ಭಾವನೆಗಳನ್ನೂ, ಅನುಭವಗಳನ್ನೂ ಸಮರ್ಥವಾಗಿ, ರಮಣೀಯವಾಗಿ ಹಿಡಿದಿಡುವಲ್ಲಿ ಸಫಲವಾಗಿದೆ.

*

# ತಿರುಮಲೆಯಲ್ಲಿ ವಸತಿ ಸೌಲಭ್ಯ

ಸರ್ವತೋಮುಖವಾಗಿ ಏರಿದ ದರಗಳ ಹಿನ್ನೆಲೆಯಲ್ಲಿ ತಿರುಮಲೆಯಲ್ಲಿನ ತಿ. ತಿ. ದೇವಸ್ಥಾನಗಳ ವಸತಿ ಸೌಲಭ್ಯದ ದರಗಳನ್ನು ಪುನರ್ವಿಮರ್ಶಿತಗೊಳಿಸಲಾಗಿದೆ. ತಿರುಮಲೆಯಲ್ಲಿ ದೊರೆಯುವ ವಸತಿಗಳ ಬಾಡಿಗೆಯ ಪರಿಷ್ಕೃತ ದರಗಳನ್ನು ಕೆಳಗೆ ಸೂಚಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಸಹಕರಿಸಬೇಕಾಗಿ ವಿನಂತಿ.

| ವಸತಿ – ಸ್ಥಳ | | ಪರಿಷ್ಕೃತ ಬಾಡಿಗೆ/ದಿನಕ್ಕೆ |
|---|---|---|
| ವಿಶೇಷರೀತಿಯ ಕಾಟೇಜುಗಳು | ರೂ | 100–00 |
| ಟಿ. ಬಿ. ಒಳಗಿನ ಕಾಟೇಜುಗಳು | ರೂ | 70–00 |
| ಟಿ. ಬಿ. ಹೊರಗಿನ ಕಾಟೇಜುಗಳು ಮೂರನೆಯ ಸಾಲೂ ಸೇರಿದಂತೆ: | | |
| ಎ ವಿಭಾಗ– ಗೈಸರ್‌ನೊಂದಿಗೆ | ರೂ | 20-00 |
| ಬಿ ವಿಭಾಗ– ಗೈಸರ್ ರಹಿತ | ರೂ | 12-00 |
| ವಿ.ವಿ.ಸಿ. ಹಾಗೂ ಎಂ ಬಿ ಸಿ. 31 ಹಾಗೂ 26 | ರೂ | 70-00 |
| ಎಂ.ಬಿ ಸಿ. ಎ–ಭಾಗ ಗೈಸರ್‌ನೊಂದಿಗೆ | ರೂ | 20-00 |
| ಎಂ.ಬಿ.ಸಿ. ಬಿ–ಭಾಗ ಗೈಸರ್ ರಹಿತ | ರೂ | 12–00 |
| ಟಿ.ಬಿ. ಸೂಟ್‌ಗಳು ಗೈಸರ್‌ನೊಂದಿಗೆ | ರೂ | 15–00 |
| ಎ ಟಿ.ಸಿ. ಸೂಟ್‌ಗಳು ಗೈಸರ್ ರಹಿತ | ರೂ | 10-00 |
| ಎ ಟಿ ಸಿ. ನೆಲ ಅಂತಸ್ತು | | |
| ಎ–ಭಾಗ ಮೊದಲ ಅಂತಸ್ತಿನಲ್ಲಿಯಂತೆ | ರೂ | 30-00 |
| ಬಿ–ಭಾಗ | ರೂ | 30–00 |
| ಎಸ್.ಎಂ.ಸಿ., ಎಸ್.ಎನ್.ಸಿ., ಎ.ಎನ್.ಸಿ., ಜಿ.ಎನ್.ಸಿ., ಎಚ್.ವಿ.ಸಿ.: | | |
| ಎ–ಭಾಗ ಗೈಸರ್ ರಹಿತ | ರೂ | 12–00 |
| ಬಿ–ಭಾಗ " | ರೂ | 12–00 |
| ಎಚ್.ವಿ.ಡಿ.ಸಿ. ಸೂಟ್ಸ್ (ಪ್ರತಿಯೊಂದು) ಗೈಸರ್ ನೊಡನೆ | ರೂ | 25–00 |
| ಎಚ್.ವಿ.ಸಿ. ಸೂಟ್ಸ್ (ಪ್ರತಿಯೊಂದು) ಗೈಸರ್‌ರಹಿತ | ರೂ | 12-00 |
| ಎಚ್.ವಿ.ಸಿ. ಅತಿಥಿಗೃಹ ದೊಡ್ಡ ಸೂಟ್ (ಗೈಸರ್‌ನೊಡನೆ) | ರೂ | 50-00 |
| " " ಸಣ್ಣ ಸೂಟ್ (ಗೈಸರ್ ರಹಿತ) | ರೂ | 25-00 |
| ಎಸ್.ವಿ. ಅತಿಥಿಗೃಹ ದೊಡ್ಡ ಸೂಟ್ | ರೂ | 70–00 |
| " " ಮೂಲೆ ಸೂಟ್ | ರೂ | 60–00 |
| " " ಇತರೆ | ರೂ | 50–00 |
| ಎಸ್.ಜಿ. ಅತಿಥಿಗೃಹ I ಹಾಗೂ II ಮೂಲೆ ಸೂಟ್ | ರೂ | 60–00 |
| ಇತರೆ | ರೂ | 50-00 |
| ಎಚ್.ಆರ್.ಜಿ. ಪೂರ್ತಿ ಕಾಟೇಜು | ರೂ | 250–00 |
| ಎಸ್. ಪಿ. ಅತಿಥಿಗೃಹ: | | |
| ಮಾಸ್ಟರ್ ಸೂಟ್ ಸಂ. 9 ಹಾಗೂ ಕಿರಿಯ ಸೂಟ್‌ಗಳು ಸಂ. 7, 9 ಪರಿಷ್ಕರಣವಿಲ್ಲ | ರೂ | 750-00 |
| ಮಾಸ್ಟರ್ ಸೂಟ್ ಸಂ. 1 ಕಿರಿಯ ಸೂಟ್ ಸಂ. 6 ಕಿರಿಯ ಸೂಟ್‌ಗಳು ಸಂ–2, 3, 4, 5, | ರೂ | 750-00 |
| ಶ್ರೀನಿಕೇತನ (ಪ್ರತಿ ಸೂಟ್), ಎಸ್.ಪಿ. ನಗರ್ ಅತಿಥಿಗೃಹ ಸಂ.-IV | ರೂ | 250-00 |
| ಇಂದಿರಾ ಅತಿಥಿಗೃಹ (ಎ. ಸಿ.) (ಪ್ರತಿಸೂಟ್) (ಎಸ್. ಪಿ. ನಗರ್ ಅತಿಥಿಗೃಹ ನಂ–II) | ರೂ | 250-00 |
| ಬಾಲಕುಟೀರಂ (ಎ.ಸಿ.) (ಪ್ರತಿಸೂಟ್) (ಎಸ್. ಪಿ. ನಗರ್ ಅತಿಥಿಗೃಹ ನಂ–III) | ರೂ | 250-00 |
| ಗೋಕುಲಂ (ಎ. ಸಿ.) | ರೂ | 500-00 |
| ಮದುವೆಯ ಹಾಲ್‌ಗಳು–ದಿನವೊಂದಕ್ಕೆ (ಪ್ರತಿಯೊಂದು): | | |
| ಎಸ್.ಎಂ.ಸಿ. 272, 260, 266, 267 | ರೂ | 75-00 |
| ರೂಯಾ 248 | ರೂ | 100-00 |
| ಗೋಗಿನೇನಿ 226 | ರೂ | 100–00 |
| ಚಿದಂಬರಂ ಚೆಟ್ಟಿಯಾರ್ ಕಾಟೇಜ್ | ರೂ | 125-00 |
| ಎ. ಟಿ. ಸಿ.– 99 | ರೂ | 100-00 |
| ಟಿ. ಬಿ. ಸಿ. 136, 152, 71 | ರೂ | 75-00 |
| ಬಾಲಾಜಿ ಕಲ್ಯಾಣ ಮಂಟಪ | ರೂ | 500-00 |
| ಸೀತಾರಾಮ ಕಲ್ಯಾಣ ಮಂಟಪ | ರೂ | 1000–00 |
| ಹೊಸದಾಗಿ ನಿರ್ಮಿತವಾದುವು: | | |
| ಟಿ.ಬಿ.ಸಿ., ಎ.ಟಿ.ಸಿ. ಪೂರ್ತಿ ಕಾಟೇಜು | ರೂ | 60–00 |
| ಮೊದಲ ಅಂತಸ್ತಿನ ಕಾಟೇಜುಗಳು ಅರ್ಧ ಕಾಟೇಜು | ರೂ | 30-00 |
| ಎಸ್. ಎಸ್. ಅತಿಥಿಗೃಹ ಪ್ರತಿ ಸೂಟ್ | ರೂ | 50-00 |
| ರಾಮಬಗೀಚಾ ಅತಿಥಿಗೃಹ " | ರೂ | 50-00 |

ಯಾತ್ರಿಕರು ಸಹಕರಿಸಬೇಕೆಂದು ಕೋರಲಾಗಿದೆ — ಮುಂಗಡ ಕಾಯಿರಿಸುವಿಕೆಗಾಗಿ ಬರೆಯಿರಿ.

**ಉಪ ಕಾರ್ಯನಿರ್ವಹಣಾಧಿಕಾರಿ** (ಸ್ವಾಗತ–II)

ತಿ. ತಿ. ದೇವಸ್ಥಾನಗಳು, ತಿರುಮಲೆ.

# ತತ್ತ್ವಶುದ್ಧಿ- ಗ್ರಂಥ ಪರಿಚಯ

ಬೆಂಗಳೂರಿನಲ್ಲಿ ಆಗಾಗ್ಗೆ ಹಳೆ ಪುಸ್ತಕದ ಅಂಗಡಿಗಳಿಗೆ ನಾನು ಹೋಗುವ ರೂಢಿ ಉಂಟು. ಹಲವೊಮ್ಮೆ ಅಪರೂಪ, ಪ್ರಾಚೀನ ಗ್ರಂಥಗಳು ನನಗೆ ಅಲ್ಲಿ ಸಿಕ್ಕಿವೆ. ಈ ರೀತಿಯಲ್ಲಿ ನನಗೆ ದೊರೆತ ಗ್ರಂಥದ ಹೆಸರು 'ತತ್ತ್ವಶುದ್ಧಿ' ಎಂಬುದು. ಇದನ್ನು ದೇವಶಿಖಾಮಣಿ ರಾಮಾನುಜಾಚಾರ್ಯರು ರಚಿಸಿದ್ದಾರೆ. ರಚಿಸಿದ ಕಾಲ 1927. ಅಂದರೆ ಇಂದಿಗೆ ಸುಮಾರು ಅರವತ್ತು ವರ್ಷ ಹಿಂದೆ ಪ್ರಕಟವಾದ ಕೃತಿಯಿದು. ಡೆಮ್ಮಿ ಅಷ್ಟ ದಳಾಕಾರದ 916+12+16+12+60= ಒಟ್ಟು 1016 ಪುಟಗಳ ಸೆಸ್ಷನ್ ಸ್ಟಿಚಿಂಗ್‌ನ ಅದ್ಭುತ ಗ್ರಂಥವಿದು. ಬಹುಶ ಆಗಿನ ನುಣುಪಾದ ಕಾಲು ಕಾಗದದ ಮೇಲೆ ಮುದ್ರಿಸಿರಬಹುದು. ಈಗಲೂ ಅದರ ನುಣುಪು ಹಾಗೆಯೇ ಇದೆ. ಅದರೆ ಬಣ್ಣ ಮಾಸಲು. ಒಂದೂ ತಪ್ಪಿಲ್ಲದ, ಸುಂದರವಾದ ಮುದ್ರಣ, ಕಣ್ಣಿಗೆ ಆನಂದವಾಗುವಂತಹ ಅಕ್ಷರ ಜೋಡಣೆ, ಕನ್ನಡಪಲ್ಲಿ ಅರವತ್ತು ವರ್ಷಗಳ ಹಿಂದೆ ಇಷ್ಟೊಂದು ಸುಂದರವಾದ ಮುದ್ರಣವಿತ್ತೆ ಎನ್ನುವ ಆಶ್ಚರ್ಯವಾಗುತ್ತದೆ.

ಈ ಪುಸ್ತಕದ ಮತ್ತೊಂದು ವಿಷಯವೆಂದರೆ ಇದು ಕನ್ನಡದ ಪ್ರಪ್ರಥಮ, ವಿಶಿಷ್ಟಾದ್ವೈತ ವೇದಾಂತದ ಸ್ವತಂತ್ರ ಕೃತಿ ಎಂಬುದು. ಸರಳ ಸುಂದರ ಭಾಷೆಯ ಮೂಲಕ ಒಂದು ವೇದಾಂತ ಗ್ರಂಥವನ್ನು ಕನ್ನಡದಲ್ಲಿ ಹೇಗೆ ಆಕರ್ಷಕವಾಗಿ ಬರೆಯಬಹುದು ಎನ್ನುವುದಕ್ಕೆ ಈ ಕೃತಿ ಒಂದು ಉತ್ತಮ ಉದಾಹರಣೆ.

ಅಲ್ಲದೆ ಈ ಪುಸ್ತಕದ ಪ್ರಕಟಣೆಗಾಗಿ ಆಗ ಮೈಸೂರು ವಿಶ್ವವಿದ್ಯಾನಿಲಯವು 350 ರೂ ಗಳ ಸಹಾಯ ಧನವನ್ನು ನೀಡಿದೆ. ಕರ್ನಾಟಕದಲ್ಲಿ ವಿಶ್ವವಿದ್ಯಾನಿಲಯವೊಂದು ಅದರಲ್ಲೂ ತಾತ್ತ್ವಿಕ ಗ್ರಂಥಕ್ಕೆ ಸಹಾಯಧನ ನೀಡಿರುವುದು ಇದೇ ಮೊತ್ತಮೊದಲು. ಮೈಸೂರು ವಿಶ್ವವಿದ್ಯಾನಿಲಯದ ಆಗಿನ ರಿಜಿಸ್ಟ್ರಾರ್‌ರವರಾಗಿದ್ದ ಶ್ರೀ ಬಿ. ಎಂ. ಶ್ರೀಕಂಠಯ್ಯನವರು ಈ ಗ್ರಂಥದ ಪ್ರಾಮುಖ್ಯತೆಯನ್ನು ಅರಿತು ಸಹಾಯಧನವನ್ನು ಮಂಜೂರು ಮಾಡಿದರು. ಸ್ವತಂತ್ರ ಕನ್ನಡ ಕೃತಿಗಳಿಗೆ ಪ್ರೋತ್ಸಾಹದಾಯಕವಾಗಿ ಅವುಗಳ ಪ್ರಕಟಣೆಗಾಗಿ ಧನಸಹಾಯ ನೀಡಿಕೆಯ ಬುನಾದಿ ಹಾಕಿದವರು ಬಿ. ಎಂ. ಶ್ರೀ ಯವರು ಎಂದರೆ, ಅವರ ದೂರದೃಷ್ಟಿ, ಹಾಗೂ ಕನ್ನಡ ಪ್ರೇಮಗಳು ಎಷ್ಟಿರಬೇಡ. ಈ ಸಹಾಯಧನಕ್ಕೆ ಪ್ರತಿಯಾಗಿ ಲೇಖಕರು ಕೃತಿಯ 12 ಪ್ರತಿಗಳನ್ನು ವಿಶ್ವವಿದ್ಯಾನಿಲಯಕ್ಕೆ ನೀಡಬೇಕು–ಎಂಬ ವಿಷಯವನ್ನು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಕಛೇರಿಯ ಪತ್ರದ ಸಂಖ್ಯೆ 14832/28–29, ತಾ. 7–3–28 ತಿಳಿಸುತ್ತದೆ.

ಈ ಕೃತಿಯ ಲೇಖಕರಾದ ದೇವಶಿಖಾಮಣಿ (ಪಂಡಿತ ಎಂ.ಡಿ.) ರಾಮಾನುಜಾಚಾರ್ಯರು, ಖ್ಯಾತ ಸಾಹಿತಿ ದೇವಶಿಖಾಮಣಿ ಅಳಸಿಂಗರಾಚಾರ್ಯರ ಸಂಬಂಧಿಗಳು. ಮೇಲುಕೋಟೆಯ ನಿವಾಸಿಗಳಾದ ರಾಮಾನುಜಾಚಾರ್ಯರು ಪ್ರಕಾಂಡ ಪಂಡಿತರು, ಸಂಸ್ಕೃತ, ಕನ್ನಡ – ಈ ಎರಡೂ ಭಾಷೆಗಳಲ್ಲಿ ಸಮಾನ ಪಾಂಡಿತ್ಯವನ್ನು ಪಡೆದಿದ್ದರು. ಅಲ್ಲದೆ ಕನ್ನಡ ಭಾಷೆಯ ಮೇಲೆ ಇವರಿಗೆ ಅಪಾರ ಪ್ರೇಮ. ಬಹಳಷ್ಟು ವರ್ಷಗಳು ಹೊರನಾಡಿನಲ್ಲಿದ್ದರೂ, ಕನ್ನಡಭಾಷೆಯ ಮೇಲಿನ ವ್ಯಾಮೋಹ ಕಡಿಮೆಯಾಗಿರಲಿಲ್ಲ. ಆ ಕಾಲಕ್ಕೇನೆ, ತಾವು ಏನೇ ಬರೆದರೂ ಕನ್ನಡದಲ್ಲಿ ಬರೆಯಬೇಕು, ಏನನ್ನೇ ಹೇಳಬೇಕಾದರೂ ಅದು ಕನ್ನಡಿಗರಿಗೆ ಲಭಿಸಬೇಕು ಎನ್ನುವ ಭಾಷಾಭಿಮಾನ ಇವರಲ್ಲಿ ತುಂಬಾ ಇತ್ತು. ಇದನ್ನು ಇವರು 'ಮಾತೃಭಾಷಾ ತಿರಸ್ಕಾರವು ಭಾರತೀಯರಿಗೆ ತಮ್ಮ ಸಮ್ಮುಖದಲ್ಲಿ ಅನ್ಯಕೃತವಾದ ಮಾತೃತಿರಸ್ಕಾರದಂತೆ' ಎಂಬ ಸ್ಪಷ್ಟ ಮಾತುಗಳಲ್ಲಿ ತಿಳಿಸಿದ್ದಾರೆ.

ಮೇಲುಕೋಟೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ, ಮೈಸೂರಿನ ಸಂಸ್ಕೃತ ಕಾಲೇಜಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿ, 'ಪೂರ್ವೋತ್ತರ ಮೀಮಾಂಸಾ ಭೂಷಣ'ರಾದರು. ಇವರಿಗೆ 'ವಿದ್ಯಾ ನಿಧಿ' ಎಂಬ ಪ್ರಶಸ್ತಿಯನ್ನೂ ನೀಡಲಾಗಿತ್ತು. ಸಂಸ್ಕೃತದಲ್ಲಿನ ಎಲ್ಲ ಧಾರ್ಮಿಕ ಗ್ರಂಥಗಳನ್ನೂ ಇವರು ಅಭ್ಯಾಸಮಾಡಿದ್ದರು. ನಂತರ ಇವರ ವಿದ್ಯಾದಾಹವು ಇವರನ್ನು ಮದ್ರಾಸ್‌ಗೆ ಕರೆದೊಯ್ಯಿತು. ಅಲ್ಲಿನ ಅಡೈಯಾರ್ ಪುಸ್ತಕಾಲಯದಲ್ಲಿ 'ಪ್ರಧಾನ ಪಂಡಿತ ಪದವಿ' ಉದ್ಯೋಗವನ್ನು ಎಂಟು ವರ್ಷಗಳವರೆಗೆ ಅಲಂಕರಿಸಿದ್ದರು.

ಇಲ್ಲಿದ್ದಾಗಲೆ ಸಾವಿರಾರು ದರ್ಶನ ಗ್ರಂಥಗಳ ಸಂಶೋಧನೆಯನ್ನು ನಡೆಸಿ, 'ಪಾಂಚರಾತ್ರ ಮಹಾಶಾಸ್ತ್ರಕ್ಕೆ ಅಂತರ್ಗತವಾದ 'ಅಹಿರ್ಬುಧ್ನ ಸಂಹಿತೆ' ಎಂಬ ವೇದಾಂತ ಸಿದ್ಧಾಂತ ಗ್ರಂಥವನ್ನು ಯಥೋಚಿತವಾದ ಟಿಪ್ಪಣಿಗಳು ಹಾಗೂ ಕಠಿಣ ಪದ ಸಂಕೇತ ವಿವರಣಗಳೊಡನೆ ಪರಿಷ್ಕರಿಸಿ ಪ್ರಕಟಿಸಿದರು. ಈ ಗ್ರಂಥವು ಸರ್ವ ಜನಾದರಣೀಯವಾಗಿ, ಜನಪ್ರಿಯವಾದುದೇ ಅಲ್ಲದೆ ಭಾರತಾದ್ಯಂತ ಖ್ಯಾತಗೊಂಡಿತು.

ನಂತರ ಇವರಿಗೆ ದೇಶ ಪರ್ಯಟನೆ ಮಾಡಿ, ಜ್ಞಾನಾರ್ಜನೆ ಮಾಡಬೇಕೆಂಬ ಅಭಿಲಾಷೆ ಉಂಟಾಯಿತು. ಅಂತೆಯೆ, ಕಾಶಿ, ಪ್ರಯಾಗ ಇತ್ಯಾದಿ ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ಅಯೋಧ್ಯೆಯನ್ನು ತಲುಪಿದರು. ಇವರ ವಿದ್ವತ್ತು, ವಾಙ್ಮಿತೆ, ಸಂಸ್ಕೃತ ಪಾಂಡಿತ್ಯವನ್ನು ಇಲ್ಲಿನ ಅನೇಕರು ಮೆಚ್ಚಿದರು. ಆಕರ್ಷಕ ಶೈಲಿ, ಸ್ಪಷ್ಟ ನಿರೂಪಣೆಯ ಮುಖಾಂತರ ತಾತ್ತ್ವಿಕ ವಿಷಯಗಳನ್ನು ಉಪನ್ಯಾಸ ಮಾಡುತ್ತಿದ್ದ ರೀತಿಯು ಅನೇಕರನ್ನು ಆಕರ್ಷಿಸಿತು. ಇವರಲ್ಲಿ ರೀವಾ ಸಂಸ್ಥಾನದ ಮಹಾರಾಜರು ಮುಖ್ಯರು.

ರೀವಾ ಸಂಸ್ಥಾನದ ಮಹಾರಾಜರುಪಾಂಡಿತ್ಯ ಉಳ್ಳವರ ಅಭಿಮಾನಿಗಳು, ವಿದ್ಯಾಪ್ರೇಮಿಗಳು. ರಾಮಾನುಜಾಚಾರ್ಯರ ವಿದ್ವತ್ತಿನಿಂದ ಪ್ರಭಾವಿತರಾದ ಇವರು 'ಶ್ರೀ ವೈಷ್ಣವ ಮಹಾವಿದ್ಯಾಲಯ' ಎಂಬ ವಿದ್ಯಾಶಾಲೆಯೊಂದನ್ನು ಅಯೋಧ್ಯೆಯಲ್ಲಿ ಪ್ರಾರಂಭಿಸಿ, ಅಲ್ಲಿನ ಅಧ್ಯಕ್ಷ ಸ್ಥಾನಕ್ಕೆ 1915 ರಲ್ಲಿ ರಾಮಾನುಜಾಚಾರ್ಯರನ್ನು ನೇಮಿಸಿದರು. ಆಚಾರ್ಯರು ಸಂತೋಷದಿಂದ ಆ ಸ್ಥಾನವನ್ನು ಅಲಂಕರಿಸಿ, ಸುಮಾರು ಐದು ವರ್ಷಗಳವರೆಗೆ (ಅಂದರೆ 1921 ರ ವರೆಗೆ) ಆ ಪದವಿಯಲ್ಲಿದ್ದರು. ಈ ಸಮಯದಲ್ಲಿ ಇವರು ನೂರಾರು ವಿದ್ಯಾರ್ಥಿಗಳನ್ನು ತಯಾರು ಮಾಡಿದರು. ಇದರೊಂದಿಗೆ ಕಾಶೀ, ಪ್ರಯಾಗ, ಬೃಂದಾವನ, ಮಥುರಾ, ದೆಹಲಿ, ಕಲ್ಕತ್ತಾ ಇತ್ಯಾದಿ ಉತ್ತರ ಭಾರತದ ಅನೇಕ ನಗರಗಳಿಗೆ ಭೇಟಿ ನೀಡಿ, ಶ್ರೀ ವೈಷ್ಣವ ಸಿದ್ಧಾಂತದ ಬಗ್ಗೆ ಪ್ರವಚನ. ಉಪನ್ಯಾಸಗಳನ್ನು ನೀಡಿದರು.

1920 ರಲ್ಲಿ ರೀವಾ ಸಂಸ್ಥಾನದ ಮಹಾರಾಜರು ಮೃತರಾದರು. ನಂತರ ಅಧಿಕಾರಸ್ಥರಾದ ನೂತನ ಮಹಾರಾಜರಿಗೆ ಈ ವಿದ್ಯಾಲಯದ ನಿರ್ವಹಣೆಯಲ್ಲಿ ಆಸಕ್ತಿ ಇರಲಿಲ್ಲ. ಇದರಿಂದ ಮಹಾವಿದ್ಯಾಲಯದ ಕಾರ್ಯಕ್ರಮಗಳು ಶೈಥಿಲ್ಯವನ್ನು ಹೊಂದಿದವು. ಆಚಾರ್ಯರಿಗೆ ಇದರಿಂದ ಬಹಳ ಬೇಸರವಾಯಿತು. ಮಹಾವಿದ್ಯಾಲಯದ ಉದ್ದೇಶವು ಸಫಲವಾಗಲಿಲ್ಲ ............ ವಾಗಿ, ಅದರಿಂದ ದೂರವಾಗಿ, ಅಯೋಧ್ಯೆಯನ್ನೇ ತ್ಯಜಿಸಿದರು.

**ರಘುಸುತ**

ನಂತರ ಇವರು ಪ್ರಖ್ಯಾತ ಕ್ಷೇತ್ರವಾದ ಬೃಂದಾವನಕ್ಕೆ ಬಂದರು. ಅದುವರೆವಿಗೂ ನಡೆದುಕೊಂಡು ಬರುತ್ತಿದ್ದ ಅಲ್ಲಿನ 'ಶ್ರೀನಿವಾಸ ವಿದ್ಯಾಲಯ' ಎನ್ನುವ ದಾರ್ಶನಿಕ ವಿದ್ಯಾಲಯವನ್ನು ಅಭಿವೃದ್ಧಿ ಪಡಿಸುವ ದೃಷ್ಟಿಯಿಂದ ಅದಕ್ಕೆ ಸಂಬಂಧಪಟ್ಟ, ಮಹನೀಯರು ಅದರ ಅಧ್ಯಕ್ಷ ಪದವಿಯನ್ನು ಅಲಂಕರಿಸುವಂತೆ ಇವರನ್ನು ಪ್ರಾರ್ಥಿಸಿದರು. ಆದರಂತೆ ಆ ಸ್ಥಾನವನ್ನು 1921 ಜನವರಿ ತಿಂಗಳಿನಲ್ಲಿ ಅಲಂಕರಿಸಿದರು. ತಮ್ಮ ಸಚ್ಛಾಸ್ತ್ರ ಪ್ರವಚನ, ಉಪನ್ಯಾಸ, ಗ್ರಂಥ ರಚನೆ, ಗ್ರಂಥ ಮುದ್ರಣ ಮೊದಲಾದ ಕಾರ್ಯ ಚಟುವಟಿಕೆಗಳೊಡನೆ ಆ ಸ್ಥಾನದಲ್ಲಿ ಮುಂದುವರೆಸರು. ಆದರೆ ಗೃಹಕೃತ್ಯ ವಿಶೇಷಗಳನ್ನು ನೆರವೇರಿಸುವ ಉದ್ದೇಶ್ಯದಿಂದ 1923 ನವೆಂಬರ್‌ನಲ್ಲಿ ಬೆಂಗಳೂರಿಗೆ ಹಿಂತಿರುಗಿ ಸ್ವಲ್ಪ ಕಾಲ ಮಲ್ಲೇಶ್ವರದಲ್ಲಿ, ವೆಸ್ಟ್‌ಪಾರ್ಕ್ ರಸ್ತೆಯಲ್ಲಿ ರಾವ್ ಬಹಾದ್ದೂರ್ ಆರ್. ನರಸಿಂಹಾಚಾರ್ಯರ ಮನೆಯಲ್ಲಿದ್ದರು.

ಇಲ್ಲಿದ್ದಾಗ ಚಾರ್ವಾಕ ದರ್ಶನ ಮೊದಲಗೊಂಡು ವಿಶಿಷ್ಟಾದ್ವೈತ ದರ್ಶನದವರೆಗೆ ಇರುವ ಇಪ್ಪತ್ತೆರಡು ದರ್ಶನಗಳಲ್ಲಿ ವಿಪುಲವಾದ ಉಪನ್ಯಾಸಗಳನ್ನು 1923 ಡಿಸೆಂಬರ್‌ನಲ್ಲಿ ನೀಡಿದರು. ಇದು ಕನ್ನಡ ಭಾಷೆಯಲ್ಲಿತ್ತು. ಇದರ ಮುಖಾಂತರ ಇವರು ಕನ್ನಡದಲ್ಲೂ ಉತ್ತಮ ವಾಗ್ಮಿಗಳು ಎಂಬುದನ್ನು ತೋರಿಸಿತು. ಇವರ ಸುಲಲಿತ, ಕನ್ನಡದಲ್ಲಿನ ಭಾಷಣವನ್ನು ಅನೇಕರು ಇಷ್ಟಪಟ್ಟು ಅದನ್ನು ಗ್ರಂಥರೂಪದಲ್ಲಿ ರಚಿಸುವಂತೆ ಪ್ರೇರೇಪಿಸಿದರು.

ಆದರಂತೆ 'ಚಾರ್ವಾಕಾದಿ ದರ್ಶನಗ್ರಂಥ'ಗಳನ್ನು ಕರ್ನಾಟಕ ಭಾಷೆಯಲ್ಲಿ ಬರೆಯಲು ಇಷ್ಟಪಟ್ಟರೂ ಕೂಡ, ಮೊದಲು ವಿಶಿಷ್ಟಾದ್ವೈತ ಗ್ರಂಥವನ್ನು ರಚಿಸಬೇಕೆಂದು ಇಷ್ಟಪಟ್ಟು, 'ತತ್ತ್ವಶುದ್ಧಿ' ಎನ್ನುವ ವೇದಾಂತ ಪ್ರಕರಣ ಗ್ರಂಥವನ್ನು 1925 ರಲ್ಲಿ ಬರೆದು ಮುಗಿಸಿದರು.

ಇದನ್ನು ಪ್ರಕಟಿಸಲು ಪ್ರಕಾಶಕರ ಬಳಿ ಓಡಾಡಿದರು. ಸಾವಿರ ಪುಟಗಳ ಈ ಗ್ರಂಥವನ್ನು ಪ್ರಕಟಿಸಲು ಯಾರೂ ಮುಂದೆ ಬರಲಿಲ್ಲ. ಆದರೆ ಧನಾಭಾವದ ಕಾರಣ ಸ್ವಂತ ಮುದ್ರಿಸಿ, ಪ್ರಕಟಿಸಲೂ ಆಗಲಿಲ್ಲ. ಹೀಗೆಯೇ ಎರಡು ವರ್ಷಗಳು ಕಳೆದು ಹೋದುವು. ನಂತರ ಕಷ್ಟಪಟ್ಟು ಸ್ವಂತ ಹಣವನ್ನು ಹಾಕಿ, ಈ ಕೃತಿಯ ಒಂದನೆಯ ಭಾಗವಾದ ಅಚಿತ್ತತ್ತ್ವ ಪರಿಚ್ಛೇದವನ್ನು 1927 ರಲ್ಲಿ ಪ್ರಕಟಿಸಿದರು. ಆದರೆ ಇದರ ಮುದ್ರಣ ಕಾರ್ಯವು ಬೆಂಗಳೂರಿನಲ್ಲಾಗಿ, ಆ ಕಾರ್ಯವು ಲೇಖಕರಿಗೆ ಸಂತೋಷದಾಯಕವಾಗಿರಲಿಲ್ಲವಾದುದರಿಂದ, ಇದರ ಎರಡನೇ ಮುದ್ರಣ ಕಾರ್ಯವನ್ನು ಕೈಗೆತ್ತಿಕೊಂಡುದುದೇ ಅಲ್ಲದೆ ಸಂಪೂರ್ಣ ಗ್ರಂಥವನ್ನು 1928 ರಲ್ಲಿ ಪ್ರಕಟಿಸಿದರು. ಈ ಸಲದ ಮುದ್ರಣ ಕಾರ್ಯವು ಮೈಸೂರಿನಲ್ಲಾಯಿತು.

## ಕೃತಿಯ ವಿಶೇಷತೆ

'ತತ್ತ್ವಶುದ್ಧಿ' ಎನ್ನುವ ಈ ಕೃತಿಯು 'ವಿಶಿಷ್ಟಾದ್ವೈತತತ್ತ್ವ' ವನ್ನು ಕುರಿತಾದ ಪ್ರಪ್ರಥಮ, ಸ್ವತಂತ್ರ ಕನ್ನಡದ ಗ್ರಂಥವಾಗಿದೆ. ಇದುವರೆವಿಗೂ 60 ವರ್ಷಗಳ ನಂತರವೂ ಇಷ್ಟೊಂದು ಬೃಹತ್ತಾದ, ಆಳವಾದ ಅಧ್ಯಯನದ ಮತ್ತೊಂದು ಕನ್ನಡ ಕೃತಿಯು ಬಂದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಇಂತಹುದೊಂದು ಕೃತಿಯ ಹಿರಿಮೆಯನ್ನು ಆಗಿನ ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್‌ರವರಾಗಿದ್ದ, ಕನ್ನಡ ಕಣ್ವ ಬಿ.ಎಂ.ಶ್ರೀ. ಯವರು ದಿಟ್ಟ ಹೆಜ್ಜೆ ಇಟ್ಟು, ಆ ವಿಶ್ವವಿದ್ಯಾನಿಲಯದ ಇತಿಹಾಸದಲ್ಲೆ ಮೊಟ್ಟಮೊದಲನೆಯದಾದ ಸಹಾಯಧನ ನೀಡಿಕೆಗಾಗಿ ವಿಶ್ವವಿದ್ಯಾನಿಲಯ ಕೌನ್ಸಿಲ್‌ನಲ್ಲಿ ಪ್ರಸ್ತಾವಿಸಿ, ಎಲ್ಲ ಸದಸ್ಯರ ಮನವೊಲಿಸುವಂತೆ ಮಾಡಿದುದು ಆ ಕಾಲಕ್ಕೇನು ಈ ಕಾಲಕ್ಕೂ ಒಂದು ಮಹಾ ಸಾಹಸವೇ ಸರಿ. ಆದರೆ ನಂತರದ ವರ್ಷಗಳಲ್ಲಿ ಇದು ಮುಂದುವರಿಯಲಿಲ್ಲವಾದರೂ, ಇಂತಹ ಗ್ರಂಥಗಳನ್ನು ಪ್ರಕಟಿಸುವ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ಪಠ್ಯಪುಸ್ತಕ ಮಾಲೆಗಳ ಸ್ಥಾಪನೆ ಮಹತ್ವಪೂರ್ಣವಾದುದು. ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ, ಪ್ರೊ|| ಎಂ. ಹಿರಿಯಣ್ಣರವರಂತಹ ಮಹಾನ್ ದಾರ್ಶನಿಕರು ಈ ಕೃತಿಯಿಂದ ಪ್ರಭಾವಿತರಾಗಿಯೇ ನಂತರದಲ್ಲಿ ಕನ್ನಡದಲ್ಲಿ

## ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲ ಅಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್‌ಗಿಂತ ಕಡಿಮೆಯವರಲ್ಲದ ಸ್ಥಳೀಯ ದೇವಾಲಯ ಆಲಾಖಾಧಿಕಾರಿಗಳಿಂದ ಪ್ರಮಾಣಪತ್ರಗಳನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ವಿಗ್ರಹಗಳನ್ನೂ 50% ರಿಯಾಯಿತಿ ದರದಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಮಂಡಲಾಧಿಕಾರಿ ಅಥವಾ ಅಸಿಸ್ಟೆಂಟ್ ಕಮೀಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ – ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ. ತಿರುಪತಿ–517501.

ತಾತ್ತ್ವಿಕ ಗ್ರಂಥಗಳನ್ನು ರಚಿಸಿದರು ಎಂದರೆ ಅತಿ ಶಯೋಕ್ತಿಯಿಲ್ಲ.

ಈ ಕೃತಿಯನ್ನು ಓದಿದ ಆ ಕಾಲದ ಕರ್ನಾಟಕ ದಾರ್ಶನಿಕರು, ಇದನ್ನು ಬಹಳವಾಗಿ ಪ್ರಶಂಸಿ ಸಿದ್ದಾರೆ.

ಮಹಾಮಹೋಪಾಧ್ಯಾಯ ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು 6–8–27 ರಂದು ಬರೆದ ಪತ್ರದಲ್ಲಿ ಈ ಕೃತಿಯ ವಿಶೇಷತೆ ಗಳನ್ನು ತಿಳಿಸುತ್ತಾ–

'ಪ್ರಾರಂಭದಿಂದ ಅಂತ್ಯದವರೆಗೆ ಈ ಕೃತಿ ಯಲ್ಲಿನ ವಿಷಯಗಳನ್ನು ಎಚ್ಚರಿಕೆಯಿಂದ, ಸೂಕ್ಷ್ಮವಾಗಿ ಪರಿಶೀಲಿಸಿದ್ದೇನೆ. ಕೃತಿಯು ಪ್ರಮು ಖತಃ ವಿಶಿಷ್ಟಾದ್ವೈತ ಸಿದ್ಧಾಂತದ ನಿಗೂಢ ವಿಷಯಗಳನ್ನು ವಿವರಿಸುವಂತಿದ್ದರೂ, ಇತರೇ ದರ್ಶನಗಳ ಸಿದ್ಧಾಂತಗಳನ್ನೂ ವಿವರಿಸಿರುವುದು. ಸಕಲ ದಾರ್ಶನಿಕ ಗ್ರಂಥಾರ್ಥ, ತತ್ತ್ವಜಿಜ್ಞಾಸು ಗಳಿಗೆ ಮಹದುಪಕಾರ ಮಾಡಿದಂತಾಗಿದೆ.'

ನವೀನಂ ರಾಮಾನುಜಾಚಾರ್ಯ ಎನ್ನುವ ಶ್ರೀ ಮನ್ಮಹಾರಾಜ ಧರ್ಮಾಧಿಕಾರಿಗಳು–

'ಸಾಮಾನ್ಯ ಜನತೆಯ ಪರಿಮಿತಿಯಿಂದ ದೂರ ವಾಗಿರುವ ತಾತ್ತ್ವಿಕ ವಿಷಯಗಳನ್ನು ಅಪಾರ ಪಾಂಡಿತ್ಯವನ್ನುಳ್ಳ ಶ್ರೀ ರಾಮಾನುಜಾಚಾರ್ಯ ರಂತಹವರು ತಮ್ಮ ಸುಲಲಿತ ಭಾಷೆ ಹಾಗೂ ಪ್ರಬೋಧನ ಶೈಲಿಯಿಂದ ಸಮಸ್ತ ಜನರ ಉಪ ಯೋಗಕಾರಿಯಾಗಿರುವ ರೀತಿಯಲ್ಲಿ ವಿವರಿಸಿರು ವುದು ಈ ಲೇಖಕರ ಹಿರಿಮೆ. ಈ ಕೃತಿಯು ತನ್ನ ನಿರೂಪಣಾ ಪ್ರೌಢಿಮೆಯಿಂದಲೂ, ಸುಲಭ ಸಾಮೀಪ್ಯತೆಯಿಂದ ಜನಮನವನ್ನು ಬಹಳಷ್ಟು ರಂಜಿಸುತ್ತದೆ.'

ಆಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಪ್ರೊಫೆಸರ್ ಆಗಿದ್ದ ಎಂ. ಹಿರಿಯಣ್ಣ ನವರು ಈ ಕೃತಿಯನ್ನು ಓದಿ ತುಂಬಾ ಸಂತೋಷ ಪಟ್ಟು, 'ಈ ಕೃತಿಯು ಉತ್ತಮ ರೀತಿಯಲ್ಲಿ ರಚನೆ ಯಾಗಿರುವುದೇ ಅಲ್ಲದೆ, ಕರಾರುವಾಕ್ಕಾದ, ವಿಷಯ ನಿರೂಪಣೆ ಹಾಗೂ ಓದುಗರು ಸುಲಭ ವಾಗಿ ಗ್ರಹಿಸುವ ರೀತಿಯಲ್ಲಿರುವ ವಿವರಣೆಗಳು ತುಂಬಾ ಚೆನ್ನಾಗಿವೆ. ಭಾರತೀಯ ತತ್ತ್ವಶಾಸ್ತ್ರದ ಎಲ್ಲ ದರ್ಶನಗಳನ್ನೂ ಜನಪ್ರಿಯಮಾಡುವ ಇವರ ಗುರಿಯು ಸಾಧುವಾದುದು, ಸೂಕ್ತವಾದುದೂ ಆಗಿದೆ.' ಎಂದರು

ಈ ಕೃತಿಯ ರಚನೆಯ ಬಗ್ಗೆ ಅನುಭವಿಸಿರುವ ಕಷ್ಟಗಳ ಬಗ್ಗೆ ಪ್ರಾಚ್ಯ ವಸ್ತು ಇಲಾಖೆಯ ನಿರ್ದೇಶಕ ಆರ್. ಶ್ಯಾಮಶಾಸ್ತ್ರಿಗಳು ಹಾಗೂ ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರ ಹೇಳಿಕೆಗಳು ಗಮ ನಾರ್ಹವಾದುವು.

ತಮ್ಮ ಹಾಗೂ ಲೇಖಕರ ಅನೇಕ ವರ್ಷಗಳ ಸಾಹಿತ್ಯಕ ಪರಿಚಯವನ್ನು ಹೊಂದಿದ್ದ ವಿದ್ಯಾ ವಿಭೂಷಣ, ವೇದಾಂತರತ್ನ ಆಲ್ಕೊಂಡವಿಲ್ಲಿ ಗೋವಿಂದಾಚಾರ್ಯರು (9–9–27 ರ ಪತ್ರ ದಲ್ಲಿ) ಈ ರೀತಿ ಹೇಳಿದ್ದಾರೆ.

'ಕನ್ನಡ ಭಾಷೆಗೆ ಹಾಗೂ ಕನ್ನಡ ನಾಡಿಗೆ ಈ ಕೃತಿಯ ಮೂಲಕ ಲೇಖಕರು ಸಲ್ಲಿಸಿರುವ ಸೇವೆ ಅವಿಸ್ಮರಣೀಯವಾದುದು. ಈ ಕೃತಿಯು ಮುಖಾಂ ತರ ಕನ್ನಡ ಭಾಷಾ ಬೆಳವಣಿಗೆ ಆಗುವುದೇ ಅಲ್ಲದೆ ಆ ಸಾಹಿತ್ಯ ವಿದ್ವಾಂಸರಿಗೆ ಈ ಕೃತಿಯು ಒಂದು ಮಾದರಿಯಾಗಿದೆ. ಕನ್ನಡ, ಸಂಸ್ಕೃತ, ತಮಿಳು ಭಾಷೆಗಳಲ್ಲಿ ಅಪಾರ ಪಾಂಡಿತ್ಯವನ್ನು ಪಡೆದಿರುವ ಶ್ರೀ ರಾಮಾನುಜಾಚಾರ್ಯರಲ್ಲದೆ ಬೇರೆಯವರಿಂದ ಇಂತಹ ಕೃತಿ ನಿರ್ಮಾಣವು ಸಾಧ್ಯವಾಗುತ್ತಿರಲಿಲ್ಲವೆಂದು ಸ್ಪಷ್ಟವಾಗಿ ಹೇಳ ಬಯಸುತ್ತೇನೆ. ವಿಶಿಷ್ಟಾದ್ವೈತ ಸಿದ್ಧಾಂತದ ಒಂದು ಅಮೂಲ್ಯರತ್ನ ಈ ಕೃತಿ'.

ಸಂಸ್ಕೃತ ಪಾಠಶಾಲೆಯಲ್ಲಿ ಈ ಕೃತಿಯು ಪಠ್ಯ ಪುಸ್ತಕವಾಗಲಿ ಎಂದು ಇವರುಗಳಲ್ಲಿ ಕೆಲವರು ಸಲಹೆ ಮಾಡಿದರೆ, ಮೈಸೂರು ವಿಶ್ವವಿದ್ಯಾನಿಲ ಯವೇ ಈ ಕೃತಿಯನ್ನು ಪ್ರಕಟಿಸಲಿ ಎಂದು ಸಲಹೆ ಮಾಡಿದ್ದಾರೆ.

## ಕೃತಿ

ವಿಶಿಷ್ಟಾದ್ವೈತ ತತ್ತ್ವವನ್ನು ಸಂಗ್ರಹವೂ, ಸರಳವಾಗಿಯೂ ವಿವರಿಸಿರುವ ಈ ಕೃತಿಯನ್ನು ಆರು ಪರಿಚ್ಛೇದಗಳಾಗಿ ವಿಭಾಗಿಸಲಾಗಿದೆ. ಇವು ಗಳಲ್ಲಿ ಅಚಿತ್ತತ್ತ್ವ ಪರಿಚ್ಛೇದವು ಮೊದಲನೆಯದು ಅನಂತರದಲ್ಲಿ ಕ್ರಮವಾಗಿ ಜೀವ ಪರಿಚ್ಛೇದ, ಈಶ್ವರ ಪರಿಚ್ಛೇದ, ನಿತ್ಯವಿಭೂತಿ ಪರಿಚ್ಛೇದ, ಜ್ಞಾನ ಪರಿಚ್ಛೇದ, ಅದ್ರವ್ಯ ಪರಿಚ್ಛೇದಗಳು ಬರುತ್ತವೆ. ತಮ್ಮ ತಮ್ಮ ಹೆಸರಿಗೆ ಅನುಗುಣ ವಾಗಿ ಆಯಾ ಅರ್ಥಗಳ ಸ್ವರೂಪ, ಸ್ವಭಾವ, ಸ್ಥಿತಿಗಳನ್ನು ವಿಶದತಮವಾಗಿ ತಿಳಿಸುವಂತೆ ಅವನ್ನು ರಚಿಸಲಾಗಿದೆ.

ಒಂದೊಂದು ಪರಿಚ್ಛೇದವೂ ವಿಷಯಾನುಸಾರ ವಾಗಿ ವಿಭಾಗಿಸಲ್ಪಟ್ಟಿರುವ ಅಂತರಾಳಿಕವಾದ ಅನೇಕ ಪ್ರಕರಣಗಳನ್ನು ಒಳಗೊಂಡಿರುವುದು. ಜೇನುಹುಳುಗಳು ನಾನಾ ಪುಷ್ಪಗಳಲ್ಲಿ ತಾವೇ ಸಂಚರಿಸಿ ಅವುಗಳ ರಸವನ್ನು ಏಕತ್ರ ಕೂಡಿಸಿ, ಅದಕ್ಕೆ ಮಧು ಎಂಬ ಹೆಸರನ್ನು ನೀಡುವಂತೆ, ಲೇಖಕರು ತತ್ತ್ವಪ್ರತಿಪಾದಕಗಳಾದ ಶಾಸ್ತ್ರೀಯ ಗ್ರಂಥಗಳಲ್ಲಿ ಮುಖ್ಯವಾದ ಮೂವತ್ತಾರು ಗ್ರಂಥ ಗಳಲ್ಲಿನ ಸಾರಾಂಶವನ್ನು ಈ ತತ್ತ್ವಶುದ್ಧಿ ಎಂಬ ಒಂದೇ ಗ್ರಂಥದಲ್ಲಿ ಸಂಗ್ರಹ ಮಾಡಿ ಅಡಗಿಸಿದ್ದಾರೆ. ಆ ಮೂವತ್ತಾರು ಗ್ರಂಥಗಳು ಯಾವುವೆಂದರೆ– ಶ್ರುತಿ (15 ಉಪನಿಷತ್ತುಗಳು), ಮನುಸ್ಮೃತಿ, ಯಾಜ್ಞ್ಯವಲ್ಕ್ಯ ಸ್ಮೃತಿ, ಮತ್ಸ್ಯ ಪುರಾಣ, ವಿಷ್ಣುಪುರಾಣ, ಗರುಡಪುರಾಣ, ವಿಷ್ಣುಧರ್ಮೋ ತ್ತರ, ಮಹಾಭಾರತ, ಬ್ರಹ್ಮಸೂತ್ರ, ಶ್ರೀಭಾಷ್ಯ ಶ್ರುತಪ್ರಕಾಶಿಕೆ, ಭಾವಪ್ರಕಾಶಿಕೆ, ತತ್ತ್ವಟೀಕೆ, ಪಂಚ ವಿಜಯ, ಶಂಕರಭಾಷ್ಯ, ರತ್ನಪ್ರಭೆ, ಭಾಮತಿ, ಪರಿಮಳ, ಭಗವದ್ಗೀತೆ (ಭಾಷ್ಯತ್ರಯ ಸಹಿತ), ಸಹಸ್ರನಾಮಭಾಷ್ಯ, ಪಂಚಸ್ತವ, ನ್ಯಾಯ ಸಿದ್ಧಾಂಜನ (ಸವ್ಯಾಖ್ಯಾ), ಸಿದ್ಧಾಂತ ಸಿದ್ಧಾಂಜನ, ತತ್ತ್ವತ್ರಯ, ರಹಸ್ಯತ್ರಯ ಸಾರ, ಶ್ರೀವಚನ ಭೂಷಣ, ಸಿದ್ಧಿತ್ರಯ, ಆಗಮ ಪ್ರಾಮಾಣ್ಯ, ವೇದಾರ್ಥಸಂಗ್ರಹ, ವೈಶೇಷಿಕ ದರ್ಶನ, ಗೌತಮ ದರ್ಶನ, ಶ್ಲೋಕವಾರ್ತಿಕ, ತಂತ್ರವಾರ್ತಿಕ, ಶಾಸ್ತ್ರದೀಪಿಕೆ ಮತ್ತು ಶಾಬರ ಭಾಷ್ಯ. ಇಷ್ಟೇ ಅಲ್ಲದೆ ಇನ್ನೂ ಅನೇಕ ಗ್ರಂಥ ಗಳ ಕೆಲವೊಂದು ಭಾಗಗಳನ್ನು ಸಂದರ್ಭಾನು ಸಾರವಾಗಿ ಲೇಖಕರು ಅಲ್ಲಲ್ಲಿ ಉದಾಹರಿಸಿದ್ದಾರೆ.

ಈ ಕೃತಿಯ ಆರು ಪರಿಚ್ಛೇದಗಳಲ್ಲಿ ಒಟ್ಟು 1148 ವಿಷಯ ಸೂಚಿಗಳಿವೆ. ಇವುಗಳನ್ನು ವಿವರವಾಗಿ ವಿವರಿಸಿರುವ ಲೇಖಕರು ಪ್ರತಿಯೊಂದು ಪರಿಚ್ಛೇದವನ್ನೂ ನಂತರ ಪ್ರಕರಣಗಳನ್ನಾಗಿ ವಿಭಾಗಿಸಿ, ಅದಕ್ಕೆ ತಕ್ಕಂತಹ ವಿಷಯ ಸೂಚಿ ಗಳನ್ನು ಅಳವಡಿಸಿದ್ದಾರೆ.

ಮೊದಲನೆಯದಾದ 'ಅಚಿತ್ತತ್ತ್ವ' ಪರಿಚ್ಛೇದ ದಲ್ಲಿ ಹನ್ನೊಂದು ಪ್ರಕರಣಗಳಿದ್ದು, 300 ವಿಷಯ ಗಳ ಸೂಚಿಯಿದೆ. ಈ ಪ್ರಕರಣಗಳು ಯಾವುವೆಂದರೆ ಪೀಠಿಕೆ, ದ್ರವ್ಯಾದ್ರವ್ಯ ವಿಭಾಗ, ದ್ರವ್ಯಾಣಾಂ ಷಿರತ್ವ ಸಮರ್ಥನ, ದ್ರವ್ಯಾಂತರ ವಿಭಾಗ, ತ್ರಿಗುಣದ್ರವ್ಯ ನಿರೂಪಣ, ಮೂಲ ಪ್ರಕೃತಿ ಮಹದಹಂಕಾರ ನಿರೂಪಣ, ಏಕದಶೇಂದ್ರಿಯ ನಿರೂಪಣ, ಪಂಚತನ್ಮಾತ್ರ–ಪಂಚಭೂತ ನಿರೂ ಪಣ, ಶೈವಾಭಿಮತ ತತ್ತ್ವಾಂತರ ನಿರಾಕರಣ– ಕಾಲತತ್ತ್ವ ನಿರೂಪಣ–ಪಂಚೀಕರಣ ನಿರೂಪಣ, ನೈಯಾಯಿಕಾದ್ಯಭಿಮತ ಶರೀರ ಲಕ್ಷಣ ತ್ರಯ ಖಂಡನಂ, ಸಿದ್ಧಾಂತ್ಯಭಿಮತ ಶರೀರಲಕ್ಷಣ ಪಂಚಕ ಶರೀರಾವಾಂತರ ವಿಭಾಗ–ಪ್ರದರ್ಶನಂ.

ಎರಡನೆಯದಾದ 'ಜೀವ' ಪರಿಚ್ಛೇದದಲ್ಲಿ 247 ವಿಷಯಗಳಿದ್ದು, ಜೀವ ಲಕ್ಷಣ ನಿರೂಪಣ, ಆತ್ಮನೋ ದೇಹಾತಿರಿಕ್ತತ್ವ ಸಮರ್ಥನ. ಆತ್ಮನ ಇಂದ್ರಿಯಾದಿ ಭಿನ್ನತ್ವ ಸಮರ್ಥನ, ಆತ್ಮನೋ ಜ್ಞಾನ ಭಿನ್ನತ್ವಾದಿ ಸಮರ್ಥನ, ಜೀವಸ್ಯ ಸ್ವಯಂ ಪ್ರಕಾಶತ್ವಾದಿ ಸಮರ್ಥನ, ಜೀವ ವಿಷಯಕ ಪ್ರಕೀರ್ಣಕ ವಿಚಾರ ನಿರೂಪಣ – ಎನ್ನುವ ಆರು ಪ್ರಕರಣಗಳಿವೆ.

ಮೂರನೆಯದಾದ ಈಶ್ವರ ಪರಿಚ್ಛೇದದಲ್ಲಿ ಏಳು ಪ್ರಕರಣಗಳಿದ್ದು, 205 ವಿಷಯಗಳಿವೆ. ಈಶ್ವರ ಲಕ್ಷಣ ನಿರೂಪಣ, ಈಶ್ವರ ಲಕ್ಷಣ ಪರಿಶಿಷ್ಟ ನಿರೂಪಣ, ನಾರಾಯಣಸ್ಯ ಸರ್ವಸ್ವಾತ್ವರತ್ವ ನಿರೂಪಣ, ಈಶರಸ್ಯ ಸರ್ವತ್ರ ಪರಿಪೂರ್ಣತ್ವ ವ್ಯವಸ್ಥಾಪನ, ಈಶ್ವರಸ್ಯ ಉಭಯ ಲಿಂಗತ್ವ ಸಮರ್ಥನ, ಈಶ್ವರಸ್ಯ 'ಅಭಿನ್ನ ನಿಮಿತ್ತೋಪಾದಾನತ್ವ ಸಮರ್ಥನ, ಪರತ್ವಾದಿ ಸ್ವರೂಪ ಪಂಚಕ ನಿರೂಪಣ' – ಎನ್ನುವವೇ ಆ ಏಳು ಪ್ರಕರಣಗಳು.

ನಾಲ್ಕನೆಯದಾದ ನಿತ್ಯವಿಭೂತಿ ಪರಿಚ್ಛೇದದಲ್ಲಿ ನಿತ್ಯವಿಭೂತಿ ಸ್ವರೂಪ–ಸ್ವಭಾವ–ನಿರೂಪಣ ಎನ್ನುವ ಒಂದೇ ಪ್ರಕರಣವಿದ್ದು 38 ವಿಷಯಗಳಿವೆ. ಇದು ಕೃತಿಯಲ್ಲಿನ ಅತ್ಯಂತ ಚಿಕ್ಕದಾದ ಪರಿಚ್ಛೇದವಾಗಿದೆ.

ಧರ್ಮಭೂತ ಜ್ಞಾನ–ಎನ್ನುವುದು ಈ ಕೃತಿಯಲ್ಲಿನ ಐದನೆಯ ಪರಿಚ್ಛೇದ. ಇದರಲ್ಲಿ ಧರ್ಮಭೂತ ಜ್ಞಾನ ಲಕ್ಷಣ ನಿರೂಪಣ, ಜ್ಞಾನಸ್ಯ ಸ್ವಯಂ ಪ್ರಕಾಶತ್ವಾನಭ್ಯುಪಗಂ ತೃ ನೈಯಾಯಿಕ ಮೀಮಾಂಸಕಮತ ನಿರೂಪಣ, ಮಾನಸ ಪ್ರತ್ಯಕ್ಷಗಮ್ಯತ್ವ ಖಂಡನ, ಜ್ಞಾನಸ್ಯ ಪ್ರಾಕಟ್ಯಾನುಮೇಯತ್ವ ಖಂಡನ, ಸ್ವಯಂಪ್ರಕಾಶತ್ವ ಸಾಧಕ ಪ್ರಮಾಣ ನಿರೂಪಣ, ದ್ವಾದಶವಿಧಾಕ್ಷೇಪ ನಿರೂಪಣ, ದ್ವಾದಶವಿಧಾಕ್ಷೇಪ ಸಮಾಧಾನ ನಿರೂಪಣ, ಜ್ಞಾನಾವಸ್ಥಾ ವಿಶೇಷ ನಿರೂಪಣ – ಎನ್ನುವ ಎಂಟು ಪ್ರಕರಣಗಳಿದ್ದು, 181 ವಿಷಯಗಳಿವೆ.

ಅದ್ರವ್ಯ ಪರಿಚ್ಛೇದ ಎನ್ನುವುದು ಆರನೆಯ ಪರಿಚ್ಛೇದ. ಇದರಲ್ಲಿ 177 ವಿಷಯಗಳಿದ್ದು, ನಾಲ್ಕು ಪ್ರಕರಣಗಳಿವೆ. ಅವು ಯಾವುವೆಂದರೆ – ಸತ್ತ್ವರಜಸ್ತಮೋಗುಣ ನಿರೂಪಣ, ಶಬ್ದ ನಿರೂಪಣ, ಸ್ಪರ್ಶರೂಪ ರಸಗಂಧ ನಿರೂಪಣ ಮತ್ತು ಸಂಯೋಗಶಕ್ತಿ ನಿರೂಪಣ.

ಈ ಗ್ರಂಥದಲ್ಲಿನ ಭಾಷೆಯು ಈ ಶತಮಾನದ ಎರಡನೆ ದಶಕದ ಭಾಷೆಯಂತೆಯೇ ಇರುವುದರಿಂದ ಈಗಿನ ಓದುಗರಿಗೆ ಸ್ವಲ್ಪ ಇರುಸುಮುರುಸಾಗಬಹುದು. ಆದರೂ ನಿಧಾನವಾಗಿ ಓದಿಕೊಂಡು ಹೋದಲ್ಲಿ ಕೃತಿಯ ಭಾಷಾ ಸೌಂದರ್ಯವು ಅರ್ಥವಾಗುವುದು.

"ಈ ರೀತಿಯಲ್ಲಿ ಆರಂಭದಲ್ಲಿ 'ನಿರ್ದೇಶಿಸಿದ್ದ ಆರು ದ್ರವ್ಯಗಳನ್ನೂ, ಹತ್ತು ಅದ್ರವ್ಯಗಳನ್ನೂ, ಅವುಗಳ ಲಕ್ಷಣ–ಸ್ವರೂಪ–ಸ್ವಭಾವ–ಸ್ವಭಾವ–ಒಳಭೇದ ಇತ್ಯಾದಿ ವಿಚಾರಗಳೊಡನೆ ಸೇರಿಸಿ, ನಿರೂಪಿಸಿದೆವು. ಇದರಿಂದ ದ್ರವ್ಯಾದ್ರವ್ಯರೂಪ ತತ್ತ್ವದ ವಿಷಯದಲ್ಲಿ ನಾನಾವಾದಿಗಳ ಕೋಲಾಹಲದಿಂದ ಜನಗಳಿಗೆ ಉಂಟಾಗಿರುವ ಅನ್ಯಥಾ ಜ್ಞಾನವನ್ನು ಪರಿಹರಿಸಿಕೊಳ್ಳುವುದಕ್ಕೂ, ಯಥಾರ್ಥ ಜ್ಞಾನವನ್ನು ಸಂಪಾದಿಸಿಕೊಳ್ಳುವುದಕ್ಕೂ ಅನುಕೂಲ್ಯವನ್ನು ಕಲ್ಪಿಸಿದಂತಾಯಿತು" ಎಂದು ಹೇಳಿರುವ ಲೇಖಕರು 'ದರ್ಶನಾಂತರಕಾರರು ಅಂಗೀಕರಿಸಿರುವ ದ್ರವ್ಯಾಂತರಗಳಿಗೂ ಅದ್ರವ್ಯಾಂತರಗಳಿಗೂ ಉಕ್ತದ್ರವ್ಯಾದ್ರವ್ಯಗಳಲ್ಲಿಯೇ ಅಂತರ್ಭಾವ ಇರುವುದು ಎಂಬುದನ್ನು ತೋರಿಸುವುದು ಸಾಧಾರಣ ಕೆಲಸವಲ್ಲ' ಎಂದು ಹೇಳಿ ಅದಕ್ಕಾಗಿ 'ತತ್ತ್ವಶುದ್ಧಿ ಪರಿಶಿಷ್ಟ' ಎನ್ನುವ ಗ್ರಂಥವನ್ನು ಬರೆದಿರುವುದಾಗಿ ತಿಳಿದ್ದಾರೆ.

ಆದರೆ ಆ ಕೃತಿಯು ಲಭ್ಯವಾಗಿಲ್ಲ. ಬಹುಶಃ ಅದನ್ನು ಬರೆದರೂ ಇಲ್ಲವೊ ಗೊತ್ತಿಲ್ಲ. ಆದರೆ 'ಶಿವತತ್ತ್ವ ಸಾರ' ಎನ್ನುವ ಗ್ರಂಥವೊಂದನ್ನು ಬರೆದಿರುವುದಾಗಿ ತಿಳಿದುಬಂದಿದೆ.

ಏನೇ ಆದರೂ 'ತತ್ವಶುದ್ಧಿ' ಯಂತಹ ಮೇರುಕೃತಿಯನ್ನೂ ರಚಿಸಿರುವ ಶ್ರೀ ರಾಮಾನುಜಾಚಾರ್ಯ ಕನ್ನಡಿಗರು ಸದಾ ನೆನಪಿನಲ್ಲಿಡಬೇಕಾದುದು ಅಗತ್ಯ ಎಂಬುದನ್ನು ಹೇಳಬಯಸುತ್ತೇನೆ.

ಸಂಪ್ರತಿ ತತ್ತ್ವಂ ಮಲಿನಂ
ಮಿಥ್ಯಾವಾದೋ ಯದಾಽಽಗತೋ ಮಲಿನಃ ।
ಸಂಪ್ರತಿ ತತ್ತ್ವಂ ವಿಮಲಂ
ತತ್ತ್ವ ವಿಶುದ್ಧಿರ್ಯದಾಽಽಗತಾ ವಿಮಲಾ ॥
ಶ್ರೀ ಬಾಲಧನ್ವಿವಂಶ್ಯೇನ ಯಾದವಾದ್ರಿ
ನಿವಾಸಿನಾ ।
ರಾಮಾನುಜಾರ್ಯ ಸುಧೀಯಾ ತತ್ತ್ವ
ಶುದ್ಧಿ ರ್ವಿರಚ್ಯತೇ ॥

★

## ತಿರುಗು ಪ್ರಯಾಣದ ಟಿಕೆಟ್ ಸೌಲಭ್ಯ

ತಿರುಪತಿಯಿಂದ ತಿರುಮಲೆಗೆ ಹೋಗಿಬರುವ ಯಾತ್ರಿಕರ ಬಸ್ ಪ್ರಯಾಣದಲ್ಲಿ ತಿರುಪತಿಯಲ್ಲಿ ಬೆಟ್ಟವನ್ನೇರುವ ಸಮಯದಲ್ಲಿಯೇ ತಿರುಮಲೆಯಿಂದ ಹಿಂದಿರುಗಲೂ ಟಿಕೆಟ್ ಪಡೆಯಬಹುದಾಗಿದೆ. ತಿರುಪತಿಯಿಂದ ಬೆಟ್ಟಕ್ಕೆ ಹೊರಡುವ ಆಂಧ್ರಪ್ರದೇಶ ರಸ್ತೆ ಸಾರಿಗೆ ಸಂಸ್ಥೆಯ ಸಾಧಾರಣ ಬಸ್‌ಗಳಲ್ಲಿ ಮಾತ್ರವೇ ಏರ್ಪಾಡಾಗಿರುವ ಈ ವ್ಯವಸ್ಥೆಯಲ್ಲಿ ತಿರುಪತಿಯಲ್ಲಿಯೇ ಬೆಟ್ಟದಿಂದ ಹಿಂದಿರುಗಿ ಬರಲು ಬೇಕಾದ ಟಿಕೆಟ್ ಅನ್ನು ಕೊಂಡ ಸಮಯದ ನಂತರದ 72 ಗಂಟೆಗಳಲ್ಲಿ ಹಿಂದಿರುಗಬಹುದೆಂದು ತಿಳಿಸಲಾಗಿದೆ. ಇದರಿಂದಾಗಿ ತಿರುಪತಿಯಲ್ಲಿ ಒಮ್ಮೆ, ತಿರುಮಲೆಯಲ್ಲಿ ಒಮ್ಮೆ ಟಿಕೆಟ್‌ಗಾಗಿ ಸರತಿಯ ಸಾಲಿನಲ್ಲಿ ನಿಲ್ಲುವುದು ತಪ್ಪಿ, ಯಾತ್ರಿಕರ ತಿರುಗುಪ್ರಯಾಣ ಸುಲಭಕರವಾಗುವುದು.

## ತಿರುಪತಿಯಲ್ಲಿ ಶ್ರೀ ತ್ಯಾಗರಾಜರ ಆರಾಧನೆ

ತಿರುಪತಿಯ ಶ್ರೀ ತ್ಯಾಗರಾಜಸ್ವಾಮಿ ದೇವಾಲಯ ಟ್ರಸ್ಟ್, ಹಾಗೂ ಆರಾಧನಾ ಸಮಿತಿಯ ಆಶ್ರಯದಲ್ಲಿ ಏಪ್ರಿಲ್ 7 ರಿಂದ 16 ರ ವರೆಗೆ ಇಲ್ಲಿನ ಶ್ರೀ ತ್ಯಾಗರಾಜ ಮಂಟಪದಲ್ಲಿ ತ್ಯಾಗರಾಜಸ್ವಾಮಿಗಳ ಆರಾಧನೆ ಯಶಸ್ವಿಯಾಗಿ ನಡೆಯಿತು.

ವಿವಿಧ ವಿದ್ವಾಂಸರುಗಳಿಂದ ದಿನವೂ ಬೆಳಗ್ಗೆ ಸಂಜೆಗಳಲ್ಲಿ ನಡೆದ ಸಂಗೀತ, ಉಪನ್ಯಾಸ ಸಭೆಗಳ ನಡುವೆ, ಏಪ್ರಿಲ್ ಹತ್ತರಂದು ಭಾನುವಾರ ಖ್ಯಾತ ವಿದ್ವಾಂಸ ಶ್ರೀ ಲಾಲ್‌ಗುಡಿ ಜಯರಾಮನ್ ಅವರಿಗೆ "ಸಪ್ತಗಿರಿ ಸಂಗೀತ ವಿದ್ವನ್ಮಣಿ" ಎಂಬ ಬಿರುದನ್ನು ಶ್ರೀ ಸಿ. ವಿ. ನರಸಿಂಹನ್ ಅವರ ಅಧ್ಯಕ್ಷತೆಯಲ್ಲಿ, ಮದ್ರಾಸು ಸಂಗೀತ ಅಕಾಡೆಮಿಯ ಅಧ್ಯಕ್ಷ ಶ್ರೀ ಟಿ. ಟಿ. ವಾಸು ಅವರು ನೀಡಿ ಸನ್ಮಾನಿಸಿದರು. ಶ್ರೀ ನೂಕಲ ಚಿನ ಸತ್ಯನಾರಾಯಣ, ಶ್ರೀ ಕೆ. ವಿ ಸುಬ್ರಹ್ಮಣ್ಯಂ ಅವರುಗಳು ಬಿರುದಾಂಕಿತರ ವಿದ್ವತ್ತೆಯನ್ನು ಪ್ರಶಂಸಿಸಿದರು.

ಶ್ರೀ ಲಾಲ್ಗುಡಿ ಜಯರಾಮನ್, ಸಿಕ್ಕಿಲ್ ಸೋದರಿಯರು, ಶ್ರೀ ಚಿಟ್ಟಿಬಾಬು, ಶ್ರೀ ನೂಕಲ ಚಿನ ಸತ್ಯನಾರಾಯಣ ಮೊದಲಾದ ಸಂಗೀತ ಕೋವಿದರು ಆರಾಧನೆಯಲ್ಲಿ ಭಾಗವಹಿಸಿ ಶ್ರೀ ತ್ಯಾಗರಾಜರಿಗೆ ಶ್ರದ್ಧಾಭಕ್ತಿಗಳಿಂದ ಕೀರ್ತನೆಗಳನ್ನು ಅರ್ಪಿಸಿ, ಸಭಿಕರನ್ನು ಆನಂದಗೊಳಿಸಿದರು.

ಕೊನೆಯದಿನ ಶ್ರೀ ತ್ಯಾಗರಾಜ ಟ್ರಸ್ಟ್‌ನ ಪೂರ್ವಸದಸ್ಯರುಗಳ ಮಕ್ಕಳನ್ನು ಅವರುಗಳ ಹಿರಿಯರ ನಿಸ್ವಾರ್ಥ ಸೇವೆಗಾಗಿ ಸತ್ಕರಿಸಲಾಯಿತು;

## ಹುಂಡಿಯಲ್ಲಿ ರಜತ ಪ್ರತಿಮೆಗಳು

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಹುಂಡಿಯಲ್ಲಿ ಕಾಣಿಕೆಯಾಗಿ ಬಂದ ಗಂಡು ಹೆಣ್ಣುಗಳ ರಜತ ಪ್ರತಿಮೆಗಳನ್ನು ಈಚೆಗೆ ಕಾಣಲಾಯಿತು. ಇದರೊಡನೆ ಎರಡು ಪಾದದ ಪ್ರತಿಮೆಗಳೂ ದೊರೆತಿದ್ದು, 1 ಕಿಲೋಗ್ರಾಂ ತೂಕದ ಈ ಪ್ರತಿಮೆಗಳನ್ನು ಅಜ್ಞಾತ ಭಕ್ತರೊಬ್ಬರು ಅರ್ಪಿಸಿದರೆಂದು ವರದಿಯಾಗಿದೆ.

## ಅನ್ನಮಾಚಾರ್ಯರ ಜಯಂತಿ ಉತ್ಸವಗಳು

ಅನ್ನಮಾಚಾರ್ಯರ 580 ನೇ ಜಯಂತಿ ಉತ್ಸವಗಳು ಮೇ ತಿಂಗಳ 3 ರಿಂದ 11 ರವರೆಗೆ ನಡೆಸುವಂತೆ ಯೋಜಿಸಲಾಗಿದೆ. ಹಿಂದಿನ ವರ್ಷಗಳಲ್ಲಿಯಂತೆ ತಿರುಪತಿಯಲ್ಲೇ ಜಯಂತಿ ಉತ್ಸವಗಳನ್ನು ಜರುಗಿಸದೆ ಆಂಧ್ರಪ್ರದೇಶದ ವಿವಿಧ ಸ್ಥಳಗಳಲ್ಲಿ ಜಯಂತಿ ಉತ್ಸವಗಳನ್ನು ನಡೆಸ

## ಆರ್ಜಿತ ಸೇವೆಗಳ ಶುಲ್ಕ ಇಳಿತ

ತಿ. ತಿ. ದೇ. ಗಳ ಧರ್ಮಕರ್ತರ ಮಂಡಳಿಯು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಭಕ್ತರು ನಡೆಸ ಬಯಸುವ ತಿರುಪ್ಪಾವಡಾ, ಸಹಸ್ರ ದೀಪಾಲಂಕಾರ ಸೇವೆ, ಅಷ್ಟದಳ ಪಾದ ಪದ್ಮಾರಾಧನೆಗಳ ಶುಲ್ಕವನ್ನು ಕಡಿಮೆಗೊಳಿಸಿ ಈ ಸೇವೆಗಳಲ್ಲಿ ಈ ನೀಡುತ್ತಿದ್ದ 5 ಗ್ರಾಂಗಳ ಚಿನ್ನದ ಪದಕ ಬಹುಮಾನ ಪದ್ಧತಿಯನ್ನು ಕೈಬಿಡಲು ತೀರ್ಮಾನಿಸಿದ್ದು ಈ ಹೊಸ ಶುಲ್ಕಗಳು 1–5–88 ರಿಂದ ಜಾರಿಗೆ ಬಂದಿವೆ. ಅದರಂತೆ—

| ಸೇವೆ | ವಾರ | ಹಳೆಯ ಶುಲ್ಕ | ಹೊಸ ಶುಲ್ಕ |
|---|---|---|---|
| ತಿರುಪ್ಪಾವಡಾ | ಗುರುವಾರ | ರೂ 5000/– | ರೂ 3500/– |
| ಸಹಸ್ರ ದೀಪಾಲಂಕಾರ | ಶುಕ್ರವಾರ | ರೂ 2000/– | ರೂ 500/– |
| ಅಷ್ಟದಳ ಪಾದ ಪದ್ಮಾರಾಧನೆ | ಮಂಗಳವಾರ | ರೂ 5116/– | ರೂ 3500/– |

ಈ ಹಿಂದೆ ಈ ಸೇವೆಗಳಲ್ಲಿ ಭಾಗವಹಿಸಿದ ಗೃಹಸ್ಥರಿಗೆ ನೀಡಲಾಗುತ್ತಿದ್ದ 5 ಗ್ರಾಂ ಬಂಗಾರದ ಪದಕ ಬಹುಮಾನವನ್ನು ಕೈಬಿಡಲಾಗಿದೆ. ಆದರೆ ಗೃಹಸ್ಥರಿಗೆ ನೀಡಲಾಗುತ್ತಿದ್ದ ಪ್ರಸಾದಗಳು ಹಾಗೂ ವಸ್ತ್ರ ಬಹುಮಾನಗಳು ಮಾತ್ರ ಎಂದಿನಂತೆ ಮುಂದುವರೆಯುತ್ತವೆ. ಭಕ್ತರು ಈ ಅವಕಾಶವನ್ನು ಹೆಚ್ಚು ಹೆಚ್ಚಿಗೆ ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು, ಐ ಎ ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರಿಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇ ಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ ॥

ಒಳಶಕ್ತಿಯ ಜೀವಸತ್ತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. —ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,
**(ಸಿ. ಎಚ್. ವೆಂಕಟಪತಿರಾಜು)**

ಬೇಕೆಂದು ನಿಶ್ಚಯಿಸಲಾಗಿದೆ. ಹೈದರಾಬಾದಿನ ರವೀಂದ್ರ ಭಾರತಿಯಲ್ಲಿ 3, 4 ಮೇ 1988, ವಿಜಯವಾಡದ ಶಿವರಾಮಕೃಷ್ಣ ಕ್ಷೇತ್ರದಲ್ಲಿ 5, 6 ಮೇ, ಕಾಕಿನಾಡದ ತಿ. ತಿ. ದೇ. ಕಲ್ಯಾಣ ಮಂಟಪದಲ್ಲಿ 7, 8 ಮೇ, ಕವಿ ವಾಗ್ಗೇಯಕಾರರ ಹುಟ್ಟೂರು ತಾಳ್ಳಪಾಕದಲ್ಲಿನ ತಿ. ತಿ. ದೇ. ಧ್ಯಾನ ಮಂದಿರದಲ್ಲಿ ಮೇ 9 ರಂದೂ, ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಮೇ 10, ಹಾಗೂ 11 ರಂದೂ ಕಾರ್ಯಕ್ರಮಗಳು ನಡೆಯುತ್ತವೆ.

ಎಲ್ಲ ಕಾರ್ಯಕ್ರಮಗಳಲ್ಲೂ ಬೆಳಗ್ಗೆ ಉಪನ್ಯಾಸ ಸಭೆಗಳೂ, ಸಂಜೆಗಳಲ್ಲಿ ಸಂಗೀತ, ನೃತ್ಯ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳೂ ಏರ್ಪಾಡಾಗಿದ್ದು, ಖ್ಯಾತ ವಿದ್ವಾಂಸ ಸಂಗೀತಗಾರರು ಭಾಗವಹಿಸಲಿದ್ದಾರೆ. ಎಲ್ಲ ಉತ್ಸವ ಸ್ಥಳಗಳಲ್ಲಿಯೂ ತಿ. ತಿ. ದೇ. ಪುಸ್ತಕ ವಿಕ್ರಯ ಶಾಲೆಗಳನ್ನು ತೆರೆದು ಸಾರ್ವಜನಿಕರಿಗೆ ತಿ.ತಿ.ದೇ. ಧಾರ್ಮಿಕ ಗ್ರಂಥಗಳನ್ನು ರಿಯಾಯಿತಿ ದರಗಳಲ್ಲಿ ಕೊಳ್ಳಲು ಅವಕಾಶ ಮಾಡಿಕೊಡಲಾಗಿದೆ.

## ಶೇಷಾದ್ರಿ ನಗರದಲ್ಲಿ ನೂತನ ಅತಿಥಿಗೃಹ

ತಿರುಮಲೆಯ ಶೇಷಾದ್ರಿನಗರದ ಪ್ರಾಂತದಲ್ಲಿ ಹೊಸದಾಗಿ ನಿರ್ಮಿತವಾದ ಅತಿಥಿಗೃಹವನ್ನು 23–4–88 ರಂದು ಬೆಳಗ್ಗೆ ತಿ. ತಿ. ದೇ. ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ ಅವರು ಉದ್ಘಾಟಿಸಿದರು. 30 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲಾದ 26 ಕೋಣೆಗಳ ಈ ಅತಿಥಿಗೃಹದ ಕೋಣೆಗಳನ್ನು ದಿನಂಪ್ರತಿ 50 ರೂಗಳ ಬಾಡಿಗೆಯಲ್ಲಿ ಯಾತ್ರಿಕರಿಗೆ ನೀಡಲಾಗುವುದು.

ಉದ್ಘಾಟನಾ ಸಮಾರಂಭದಲ್ಲಿ ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಸದಸ್ಯರು, ಆಂಧ್ರ ಪ್ರದೇಶ ಧಾರ್ಮಿಕ ದತ್ತಿ ಇಲಾಖಾ ಕಮೀಷನರ್ ಶ್ರೀ ಜೆ. ಬಾಪುರೆಡ್ಡಿ ಮತ್ತು ಇತರ ಅಧಿಕಾರಿಗಳು ಭಾಗವಹಿಸಿದ್ದರು.

## ತಿ. ತಿ. ದೇ. ವಿಶೇಷ ದರ್ಜೆಯ ಡೆಪ್ಯೂಟಿ ಇ. ಓ. ಶ್ರೀ ಆರ್. ವಾಸುದೇವ ನಾಯುಡು

ತಿರುಪತಿ–ತಿರುಮಲೆ ದೇವಸ್ಥಾನಗಳ ವಿಶೇಷ ದರ್ಜೆಯ ಡೆಪ್ಯೂಟಿ ಕಾರ್ಯನಿರ್ವಹಣಾಧಿಕಾರಿ ಪದವಿಯಲ್ಲಿ ಪ್ರಸ್ತುತ ಡೆಪ್ಯೂಟಿ ಕಾರ್ಯ–ನಿರ್ವಹಣಾಧಿಕಾರಿಯಾಗಿ ಕಾರ್ಯ ನಿರ್ವಹಿ

...ತ್ತಿರುವ ಶ್ರೀ ಆರ್. ವಾಸುದೇವ ನಾಯುಡು ಅವರನ್ನು ನೇಮಕ ಮಾಡಲಾಗಿದೆ. ಇದುವರೆಗೆ ಈ ಪದವಿಯಲ್ಲಿ ಜಾಯಿಂಟ್ ಇ. ಓ. ಸ್ಥಾಯಿಯ ಐ. ಎ. ಎಸ್. ಅಧಿಕಾರಿಗಳೇ ಇದ್ದು, ಈಗ ತಿ. ತಿ. ದೇ. ಗಳ ಸೀನಿಯರ್ ಅಧಿಕಾರಿಯನ್ನು ಈ ಪದವಿಗೆ ಭಡತಿ ನೀಡಿ ತರಲಾಗಿದೆ.

## ಮೆಟ್ಲ ಉತ್ಸವ

ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿ ದರ್ಶನಕ್ಕಾಗಿ ಭಾಷಾಭೇದವಿಲ್ಲದೆ ಸಹಸ್ರಾರು ಮಂದಿ ಭಕ್ತರು ಒಟ್ಟಿಗೆ ಸೇರಿ ಅಲಿಪಿರಿಯಿಂದ ತಿರುಮಲೆಗೆ ನಡೆದು ಭಜನೆ ಮಾಡುತ್ತ ಸಾಗುವ ಮೆಟ್ಲ ಉತ್ಸವ ವೈಭವದಿಂದ ಏಪ್ರಿಲ್ 12 ರಂದು (ಸೌರಮಾನ ಉಗಾದಿಯ ಹಿಂದಿನ ದಿನ) ನಡೆದು ಯಶಸ್ವಿಯಾಯಿತು.

ತಮಿಳುನಾಡು, ಕರ್ನಾಟಕ, ಆಂಧ್ರಪ್ರದೇಶ, ಕೇರಳಗಳಿಂದ ತಿರುಪತಿಯನ್ನು ಸೇರಿದ 5000 ಮಂದಿಯ 120 ಭಜನ ಸಂಘಗಳು ಮಂಗಳವಾರ ಬೆಳಗ್ಗೆ ಆರುಗಂಟೆಗೆ ಅಲಿಪಿರಿಯನ್ನು ಸೇರಿದ ಮೇಲೆ, ತಿ. ತಿ. ದೇ. ಧರ್ಮ ಪ್ರಚಾರ ಪರಿಷತ್ ಕಾರ್ಯದರ್ಶಿ ಶ್ರೀ ಮೇಡಸಾನಿ ಮೋಹನ್ ಅವರಿಂದ ಮೆಟ್ಲ ಉತ್ಸವ ಆರಂಭವಾಯಿತು. ಭಗವಂತನನ್ನು ಸೇರುವ ಹಾದಿಯ ಪ್ರತಿ ಮೆಟ್ಟಿಲೂ ಪೂಜನೀಯ ಎಂಬ ಭಾವನೆಯಿಂದ ಮೆಟ್ಟಿಲ ಪೂಜೆ ಮಾಡುತ್ತ ಭಜನ ಗೋಷ್ಠಿಗಳು ಬೆಟ್ಟವನ್ನೇರಿದವು.

ಕಳೆದ 19 ವರ್ಷಗಳಿಂದ ಈ ಉತ್ಸವವನ್ನು ಪ್ರತಿವರ್ಷವೂ ನಡೆಸಿಕೊಂಡು ಬಂದಿರುವ ಮೆಟ್ಲ ಉತ್ಸವ ಸಂಘ ಕಾರ್ಯದರ್ಶಿ ಶ್ರೀ ನರಸಿಂಹಂ ಅವರು ಒಂದು ಭಜನೆ ಮಂದಿರವನ್ನು ನಿರ್ಮಿಸಿ ಈ ಉತ್ಸವವನ್ನು ಮತ್ತಷ್ಟು ವೈಭವದಿಂದ ನಡೆಸುವ ಆಲೋಚನೆಯಿದೆ ಎಂದು ನುಡಿದರು.

## ಸ್ವಾಮಿ ಸನ್ನಿಧಿಯಲ್ಲಿ ಶ್ರೀ ಪ್ರೇಮದಾಸ

ಶ್ರೀಲಂಕಾ ದೇಶದ ಪ್ರಧಾನಮಂತ್ರಿ ಶ್ರೀ ಪ್ರೇಮದಾಸ ಹಾಗೂ ಅವರ ಪತ್ನಿ ಶ್ರೀಮತಿ ಹೇಮಾ ಪ್ರೇಮದಾಸ ಅವರುಗಳು 22 ರಂದು ಬೆಳಗ್ಗೆ ಶ್ರೀ ವೆಂಕಟೇಶ್ವರಸ್ವಾಮಿ ದರ್ಶನಕ್ಕಾಗಿ ತಿರುಮಲೆಗೆ ಆಗಮಿಸಿದ್ದರು. ಪ್ರಧಾನ ಮಂತ್ರಿ ದಂಪತಿಗಳು ತಿರುಮಲೆಯ ಶ್ರೀ ಪದ್ಮಾವತೀ ಅತಿಥಿಗೃಹಕ್ಕೆ ಬಂದಾಗ ಅವರನ್ನು ತಿ. ತಿ. ದೇ. ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ, ಕಾರ್ಯನಿರ್ವಹಣಾಧಿಕಾರಿ ಶ್ರೀ ವೆಂಕಟಪತಿ ರಾಜು, ಎ. ಇ. ಓ. ಶ್ರೀ ಎನ್. ರಮೇಶ ಕುಮಾರ್, ಸೆಕ್ಯೂರಿಟಿ ಆಫೀಸರ್ ಶ್ರೀ ಎಸ್. ಕೆ. ಜಯಚಂದ್ರ ತಿ.ತಿ.ದೇ. ಬೋರ್ಡ್ ಸದಸ್ಯರು ಮೊದಲಾದವರು ಸ್ವಾಗತಿಸಿದರು.

ಅಂದು ಬೆಳಗ್ಗೆ ಹನ್ನೊಂದು ಗಂಟೆಗೆ ಸ್ವಾಮಿಯನ್ನು ಸಂದರ್ಶಿಸಿ, ಆರಾಧಿಸಿದ ಪ್ರಧಾನಿಗಳಿಗೆ ವೇದೋಕ್ತ ಆಶೀರ್ವಾದದೊಡನೆ ರೇಷ್ಮೆ ವಸ್ತ್ರ ಹಾಗೂ ಪ್ರಸಾದಗಳನ್ನು ನೀಡಲಾಯಿತು.

ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯನವರು ಪ್ರಧಾನಿಗಳಿಗೆ ತಿರುಮಲೆ ದೇವಾಲಯದ ಇತಿಹಾಸವನ್ನು ಆಂಗ್ಲ ಭಾಷೆಯಲ್ಲಿ ವಿವರಿಸುವ ಗ್ರಂಥವನ್ನೂ, ಅನ್ನಮಾಚಾರ್ಯರ ಭಕ್ತಿಗೀತೆಗಳ ಧ್ವನಿಸುರುಳಿಯನ್ನು ನೀಡಿದರು. ದೇವಾಲಯದಲ್ಲಿ ಒಂದು ಗಂಟೆ ಇದ್ದ ಶ್ರೀ ಪ್ರೇಮದಾಸ ದಂಪತಿಗಳು ದೇವಾಲಯಕ್ಕೆ ನವಿಲಿನ ಆಕಾರದ ಹಿತ್ತಾಳೆಯ ದೀಪವನು ಕಾಣಿಕೆಯಾಗಿ ನೀಡಿದಾರೆ.

## ತಿರುಪತಿಯಲ್ಲಿ ರಾಮಕಥಾಸ್ಪಂದಿತ ಕಾವ್ಯಗೋಷ್ಠಿ

ರಾಮಚಂದ್ರನ ಕಥೆಯನ್ನು ಹಲವರು ಹಲವು ಭಾಷೆಗಳಲ್ಲಿ ವಿವರಿಸುತ್ತಿದ್ದರೂ ದಿನದಿನವೂ ಹೊಸ ಹೊಸ ಕೃತಿಗಳಿಗೆ ಆಕರವಾಗಿ, ಸ್ಫೂರ್ತಿಯಾಗಿ, ಪ್ರೇರಕವಾಗಿ ಉಳಿದು ಬಂದಿರುವ ಶ್ರೀರಾಮಚಂದ್ರನ ಜೀವನದಿಂದ ಪ್ರಭಾವಿತವಾದ ಕಾವ್ಯಗೋಷ್ಠಿಯೊಂದು ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ತಿರುಪತಿಯ ಬುಗ್ಗ ಮಠಂನವರ ಆಶ್ರಯದಲ್ಲಿ ನಡೆದು ಯಶಸ್ವಿಯಾಯಿತು.

ಕನ್ನಡ, ತೆಲುಗು, ಹಿಂದಿ, ಮಲೆಯಾಳ ತಮಿಳು ಭಾಷೆಯ ಕವಿಗಳು ಪಾಲುಗೊಂಡ ಇಂತಹ ಕಾವ್ಯಗೋಷ್ಠಿ ಭಾರತೀಯ ಚರಿತ್ರೆಯಲ್ಲೇ ಅಪೂರ್ವವೆಂದು ಅಧ್ಯಕ್ಷ ಪೀಠದಿಂದ ಆಂಧ್ರ ಪ್ರದೇಶದ ದೇವಾದಾಯ ಇಲಾಖಾ ಕಮೀಷನರ್ ಡಾ॥ ಜೆ. ಬಾಪುರೆಡ್ಡಿ ಅವರು ನುಡಿದರು. ಮುಖ್ಯ ಅತಿಥಿಯಾಗಿ ಪಾಲುಗೊಂಡ ಶ್ರೀ ನಂಡೂರಿ ರಾಮಕೃಷ್ಣಮಾಚಾರ್ಯ ಅವರು ವಾಲ್ಮೀಕಿಯನ್ನು ಕುರಿತು ವಿವರಿಸಿದರು.

ರಾಮಕಥಾಸ್ಪಂದಿತ ಕಾವ್ಯಗೋಷ್ಠಿಯಲ್ಲಿ ಡಾ॥ ಬೋಯಿ ಭೀಮನ್ನ, ಡಾ॥ ನಾಯನಿ ಕೃಷ್ಣಕುಮಾರಿ, ಡಾ॥ ಯು. ನಾಲಕೊಂಡಾರೆಡ್ಡಿ, ಡಾ॥ ಮೇಡಸಾನಿ ಮೋಹನ್, ಶ್ರೀ ರಾಜನ್ನ ಕವಿ, ಶ್ರೀ ಆಚಾರ್ಯ ತಿರುಮಲ, ಶ್ರೀ ಎಂ.ಕೆ. ರಾಮು, ಶ್ರೀ ಎಸ್. ಲಕ್ಷ್ಮಣಯ್ಯ, ಆಚಾರ್ಯ ಸಿ. ಪುರುಷೋತ್ತಮರಾವು, (ತೆಲುಗು) ಶ್ರೀಮತಿ ಪೂರ್ಣಿಮಾದೇವಿ, ಡಾ॥ ದ್ವಾರಕಾನಾಥ್ (ಕನ್ನಡ), ಪುಲವರ್ ಇಳಂಗೋವನ್ (ತಮಿಳು) ಶ್ರೀ ವಿ. ಚಂದ್ರಮೌಳಿ(ಮಲೆಯಾಳ), ಆಚಾರ್ಯ ಭೀಮಸೇನ ನಿರ್ಮಲ್ (ಹಿಂದಿ) ಮೊದಲಾದವರು ಪಾಲುಗೊಂಡು ತಮ್ಮ ಕವನಗಳನ್ನು ವಾಚಿಸಿದರು.

ತಿ. ತಿ. ದೇ. ಬೋರ್ಡ್ ಸದಸ್ಯ ಶ್ರೀ ಐ. ಎಲ್. ಎನ್. ಶಾಸ್ತ್ರಿ ಅವರು ಕವಿಗಳಿಗೆ ಜ್ಞಾಪಿಕೆಗಳನ್ನು ನೀಡಿದರು. ಆಚಾರ್ಯ ತಿರುಮಲ ಅವರು ಕವಿಗಳ ಪರಿಚಯವನ್ನು ಮಾಡಿದರು.

## ತಿ. ತಿ. ದೇ. ಉಪಸಮಿತಿಗಳಿಗೆ ಹೊಸ ಸದಸ್ಯರ ನಾಮಕರಣಗಳು

ತಿ. ತಿ. ದೇ. ಗಳ ಧರ್ಮಕರ್ತರ ಮಂಡಳಿಯು, ತಿ. ತಿ. ದೇ. ಗಳ ಉಪಸಮಿತಿಗಳಿಗೆ ತಮ್ಮ ಸದಸ್ಯರುಗಳನ್ನು ಹೊಸದಾಗಿ ನಾಮಕರಣ ಮಾಡಿದೆ. ಅದರಂತೆ ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಸದಸ್ಯರುಗಳಾದ ಶ್ರೀ ಎಸ್. ಆರ್. ಲಕ್ಷ್ಮೀನಾರಾಯಣ ಅವರು ಆಡಳಿತ ಉಪಸಮಿತಿಯಲ್ಲೂ, ಶ್ರೀ ಚೆಲ್ಲಾ ಪ್ರಭಾಕರ ರೆಡ್ಡಿ ಆರ್. (ಶಾಸನ ಸಭಾಸದಸ್ಯರು) ಅವರು ಕಾರ್ಯ ಸಮಿತಿಯಲ್ಲಿನ ಜೆ. ನಾಗಿರೆಡ್ಡಿ (ಶಾಸನ ಸಭಾಸದಸ್ಯರು) (ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಸದಸ್ಯರು) ಅವರ ಸ್ಥಾನದಲ್ಲೂ, ಶ್ರೀ ಬಿ. ರಾಮಚಂದ್ರ ರಾಜು ಅವರು ತಿ. ತಿ. ದೇ. ಸಹಕಾರಿ ಮಾರಾಟ ಮಳಿಗೆಯ ನಿರ್ದೇಶಕರಾಗಿಯೂ ನಾಮಕರಣಗೊಂಡಿದ್ದಾರೆ.

*

ಮುಂದಿನ ಸಂಚಿಕೆಯಲ್ಲಿ ...... .... ...

**ಸಪ್ತಗಿರಿ. — ಜೂನ್ 1988**

**ಶ್ರೀಪಾದರಾಯರು**

– ಕೆ ರಮಾನಂದ

**ವಲ್ಲಭಾಚಾರ್ಯ**

– ಭೀಮಾಚಾರ್ಯ ಗುಡಿ

**ಗಜೇಂದ್ರಮೋಕ್ಷ**

– ಡಿ. ಕೃಷ್ಣೈಂಗಾರ್

**ಪ್ರಾಚೀನ ನ್ಯಾಯಶಾಸ್ತ್ರಗಳು**

– ವಿದ್ವಾನ್ ಬ. ನ. ಗುಂಡೂರಾವ್

**ಅರುಂಧತೀ**

– ರಘುಸುತ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ಸಂಪಾದಕರು

ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯ ದಿನಗಳು

**ಜೂನ್ 1988**

| | | |
|---|---|---|
| 1. | ಬುಧವಾರ | ನಾರಾಯಣವನಂ ಕಲ್ಯಾಣ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವದ ಗರುಡೋತ್ಸವ |
| 4. | ಶನಿವಾರ | ,, ,, ,, ರಥೋತ್ಸವ |
| 16. | ಗುರುವಾರ | ಪೆರಿಯಾಳ್ವಾರ್ ಉತ್ಸವಾರಂಭ |
| 25. | ಶನಿವಾರ | ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವಾರಂಭ |
| 27. | ಸೋಮವಾರ | ನಾಥಮುನಿಗಳ ವರ್ಷ ತಿರುನಕ್ಷತ್ರ |
| 28. | ಮಂಗಳವಾರ | ಮುಳಬಾಗಲು ನೃಸಿಂಹತೀರ್ಥದಲ್ಲಿ ರಥೋತ್ಸವ |
| 29. | ಬುಧವಾರ | ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ ಸಮಾಪ್ತಿ. |

# ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರಲ್ಲಿ ಜೂನ್ 1988 ಕ್ಕೆ ಚಂದಾ ಅವಧಿ ಮುಗಿಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನೀಡಲಾಗಿದೆ. ಚಂದಾದಾದರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎಂ.ಓ. ಮಾಡಬೇಕೆಂದು ವಿನಂತಿ.

46, 85, 121, 122, 153, 159, 160, 161, 163, 164, 166, 242, 243, 289, 294, 334, 352, 353, 355, 357, 363, 364, 395, 427, 460, 464, 466, 468, 469, 472 ರಿಂದ 475, 479, 480, 482, 484, 485, 488, 495, 501, 502, 503, 510, 516 ರಿಂದ 519, 544, 896, 1516, 1517, 1520, 1523, 1525 ರಿಂದ 1539, 1542 ರಿಂದ 1566, 1569.

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬಿಡಿಯಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ. ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮ ಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯ ಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**

**ತಿ. ತಿ. ದೇ. ತಿರುಪತಿ.**

## ಋಗ್ವೇದ

ಮೂಲ–ತೆಲುಗು ವ್ಯಾಖ್ಯಾನ.

ನಾಲ್ಕು ಸಂಪುಟಗಳು ಬಿಡುಗಡೆಯಾಗಿವೆ. ತಿ. ತಿ. ದೇ. ಸಮಾಚಾರ ಕೇಂದ್ರಗಳಲ್ಲೆಲ್ಲ ಪ್ರತಿಗಳು ದೊರೆಯುತ್ತವೆ. ಪ್ರತಿಸಂಪುಟದ ಬೆಲೆ ರೂ 100 ಮಾತ್ರ.

ಕೂಡಲೇ ನಿಮ್ಮ ಬಳಿಯ ತಿ. ತಿ. ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

